

# ಕೆ. ಜ್ಞಾನೇಶ್ವರ್

## ಬದುಕು ಮತ್ತು ಕಲಾಕೃತಿಗಳು

ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಸಂಶೋಧನ ಪ್ರಬಂಧ


ಪ್ರಬಂಧಕಾರರು

◆ ಮಂಜುಳಬಾಯಿ.ಎಲ್.ಬಿ

ಮಾರ್ಗದರ್ಶಕರು

◆ ಡಾ.ಕೆ.ರವೀಂದ್ರನಾಥ







ದೃಶ್ಯಕಲಾ ವಿಭಾಗ

ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಕೆ. ಜ್ಞಾನೇಶ್ವರ : ಬದುಕು ಮತ್ತು ಕಲಾಕೃತಿಗಳು

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನೆ ಪ್ರಬಂಧ)

ಸಂಶೋಧಕರು

**ಮಂಜುಳಾಬಾಯಿ ಎಲ್.ಟಿ.**

ಮಾರ್ಗದರ್ಶಕರು

**ಡಾ. ಕೆ. ರವೀಂದ್ರನಾಥ**

ಮುಖ್ಯಸ್ಥರು



**ದೃಶ್ಯಕಲಾ ವಿಭಾಗ**

**ಲಲಿತಕಲಾ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ - ೫೮೩ ೨೭೬**

೨೦೧೪

# ದೃಢೀಕರಣ ಪತ್ರ

**ಮಂಜುಳಾ ಬಾಯಿ ಎಲ್.ಟಿ.** ಇವರು ನನ್ನ ಮಾರ್ಗದರ್ಶನದಲ್ಲಿ **ಕೆ. ಜ್ಞಾನೇಶ್ವರ : ಬದುಕು ಮತ್ತು ಕಲಾಕೃತಿಗಳು** ಎಂಬ ಶೀರ್ಷಿಕೆಯ ಸಂಶೋಧನಾ ಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಸಿದ್ಧಪಡಿಸಿದ್ದು ಕನ್ನಡ ವಿಶ್ವವಿದ್ಯಾಲಯ, ಹಂಪಿ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸಿದ್ದಾರೆ.

ಸದರಿ ಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು, ಇದರ ಯಾವುದೇ ಭಾಗ ಮತ್ತು ವಿಷಯವನ್ನು ಯಾವುದೇ ಉದ್ದೇಶಕ್ಕೆ ಬಳಸಿಕೊಂಡಿಲ್ಲ ಮತ್ತು ಈ ಮೊದಲು ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ. ಮತ್ತು ದೃಶ್ಯಕಲಾ ವಿಭಾಗದ ಮೂಲಕ ಈ ಸಂಶೋಧನಾ ಪ್ರಬಂಧವನ್ನು ಸಲ್ಲಿಸಲಾಗುತ್ತದೆ.

**(ಡಾ. ಕೆ. ರವೀಂದ್ರನಾಥ)**
ಮಾರ್ಗದರ್ಶಕರು
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ: ವಿದ್ಯಾರಣ್ಯ
ದಿನಾಂಕ: ೨೦/೬/೧೪

# ಪ್ರಮಾಣ ಪತ್ರ

**ಕೆ. ಜ್ಞಾನೇಶ್ವರ : ಬದುಕು ಮತ್ತು ಕಲಾಕೃತಿಗಳು** ಎಂಬ ಶೀರ್ಷಿಕೆಯ ಕಿರುಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ದೃಶ್ಯಕಲಾ ವಿಭಾಗದ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರಾದ ಡಾ.ಕೆ.ರವೀಂದ್ರನಾಥ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯ ಹಂಪಿ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಈ ಸಂಶೋಧನ ಪ್ರಂಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಕಿರುಪ್ರಬಂಧದ ಯಾವುದೇ ಭಾಗವನ್ನು ಇನ್ನಿತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಪ್ರಮಾಣಿಕರಿಸುತ್ತೇನೆ.

**(ಮಂಜುಳ ಬಾಯಿ ಎಲ್.ಟಿ.)**
ಎಂ.ಫಿಲ್.
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ: ವಿದ್ಯಾರಣ್ಯ
ದಿನಾಂಕ:

# ಕೆ. ಜ್ಞಾನೇಶ್ವರ : ಬದುಕು ಮತ್ತು ಕಲಾಕೃತಿಗಳು

## ಪರಿವಿಡಿ

# ಕೆ. ಜ್ಞಾನೇಶ್ವರ : ಬದುಕು ಮತ್ತು ಕಲಾಕೃತಿಗಳು

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನೆ ಪ್ರಬಂಧ)


ಸಂಶೋಧಕರು

**ಮಂಜುಳಾಬಾಯಿ ಎಲ್.ಟಿ.**

ಮಾರ್ಗದರ್ಶಕರು

**ಡಾ. ಕೆ. ರವೀಂದ್ರನಾಥ**

ಮುಖ್ಯಸ್ಥರು





**ದೃಶ್ಯಕಲಾ ವಿಭಾಗ**

**ಲಲಿತಕಲಾ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ - ೫೮೩ ೨೭೬**

೨೦೧೪

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

## ಪ್ರಸ್ತಾವನೆ

ಮಾನವನು ಬಹಳ ಕಾಲದ ಹಿಂದೆ ನಿಸರ್ಗದೊಡನೆ ಅತ್ಯಂತ ನಿಕಟವರ್ತಿಯಾಗಿದ್ದನು. ಮಾನವನು ಪಶು, ಪಕ್ಷಿಗಳೊಡನೆ ಗಿಡ, ಮರ, ಬಳ್ಳಿ, ನದಿ, ಬೆಟ್ಟ, ಕಾಡು-ಮೇಡುಗಳ ನಡುವೆ ತನ್ನ ಜೀವನವನ್ನು ನಡೆಸಿಕೊಂಡು ಸಾಗುತ್ತಿದ್ದಾಗ ಅವನ ಮನಸ್ಸು ಸಹಜವಾಗಿಯೇ ನೋಡುತ್ತಾ ಹೋದಾಗೆಲ್ಲಾ ಏನೋ ಸಂತೋಷ ಉಂಟಾಗುತ್ತದೆ. ಒಂದು ಅಪೂರ್ವ ಅನುಭವವನ್ನು ವ್ಯಕ್ತ ಪಡಿಸುವ ಕಲಾಸೃಷ್ಠಿಗೆ ನಾಂದಿಯಾಗುತ್ತದೆ.

ಕಲೆ ಜೀವನಾವಲಂಬಿ ಜೀವನ ವಿಮರ್ಶೆ ಜೀವೋನ್ನತಿ ಸಾಧಕನ ಮಾತನ್ನು ಒಪ್ಪಿಕೊಂಡಂತೆಯೇ ಅದರ ಮೂಲ ಉದ್ದೇಶ ಮನರಂಜನೆ ಎಂಬುದನ್ನು ಒಪ್ಪಿಕೊಳ್ಳದಿರಲಾರೆವು. ಈ ವಿಸ್ಮಯಕಾರಿ ಕಲಾ ಪ್ರಪಂಚದ ನೆಲೆಯ ಬಗ್ಗೆ ಬಹುಬಗೆಯ ಚರ್ಚೆಗಳು ನಡೆದಿವೆ. ಒಂದೊಂದು ಬಗೆಯಲ್ಲಿ ಒಬ್ಬೊಬ್ಬ ದಾರ್ಶನಿಕರು ಅದರ ಮೌಲ್ಯವನ್ನು ತೂಗಿ ನೋಡಿದ್ದಾರೆ. ಮನುಷ್ಯನ ಮನಸ್ಸು ಅಗಮ್ಯವಾಗಿರುವ ತನಕ ಅದರ ಅಭಿವ್ಯಕ್ತಿಗೊಂಡ ಕಲೆ-ನೆಲೆಯ ಸ್ವರೂಪಗಳು ಸಂದಿಗ್ಧವಾಗಿಯೇ ಉಳಿದಿದೆ. ಈ ಹಿನ್ನೆಲೆಯಲ್ಲಿನ ನಮ್ಮ ನಾಡಿನ ಸಾಂಸ್ಕೃತಿಕ ಪರಂಪರೆಯ ಇತಿಹಾಸವನ್ನು ಗಮನಿಸಿದಾಗ ಚಿತ್ರ, ಶಿಲ್ಪಿ, ಸಂಗೀತ, ಸಾಹಿತ್ಯ ಎಲ್ಲವೂ ಸ್ವಾತಂತ್ರ್ಯವಾದ ಒಂದೊಂದು ಧರ್ಮವುಳ್ಳ, ಒಂದೊಂದು ಪರಿಮಿತಿವುಳ್ಳ ಭಾವ ಪ್ರಕಟಣೆಯ ಸಾಧನಗಳೆಂಬುದು ನಮಗೆ ತಿಳಿದ ವಿಷಯವೇ ಆಗಿದೆ. ಹಾಗೆಯೇ ಈ ಕಲಾ ಪರಂಪರೆಯ ಹಿಂದೆ ದುಡಿದ ಕಲಾವಿದರು ಅನನ್ಯ. ಕಲಾಕೃತಿ ನಿರ್ಮಿಸಿದ ಕೂಡಿಗೆಯೂ ಬಹು ಪ್ರಾಮುಖ್ಯವಾಗಿರುತ್ತದೆ ಎಂಬುದು ನಮ್ಮ ಕಲಾ ಸಂಸ್ಕೃತಿಯ ಪರಂಪರೆಯನ್ನು ಹೆಚ್ಚಿಸಲು ಸಹಾಯಕವಾಗಿ ನಿಲ್ಲುತ್ತದೆ ಎಂಬುದನ್ನು ತಿಳಿಸುತ್ತದೆ.

'ಅಭಿವ್ಯಕ್ತಿ ಕ್ರಿಯೆಯಿಂದ ವ್ಯಕ್ತಿಯ ಜೊತೆ ಜೊತೆಗೆ ಅವನ ಸಮುದಾಯದ ಬದುಕು ವ್ಯಕ್ತವಾಗುತ್ತ ಹೋಗುತ್ತದೆ. ಭೌತಿಕ ಮತ್ತು ಆಧ್ಯಾತ್ಮಿಕ ಅಸ್ತಿತ್ವಕ್ಕೆ ಸೌಂದರ್ಯವನ್ನು ತಂದುಕೊಡುವ ಕೆಲಸಗಳೆಲ್ಲವೂ ಕಲೆಯ ಕ್ಷೇತ್ರದಲ್ಲಿ ನಡೆಯುತ್ತಾ ಬಂದಿವೆ'[1] ಕಲಾ ಪ್ರಪಂಚದ ಮೇಲೆ ಚೆಲ್ಲಿದ ಬೆಳಕು ಹೊಸದಾಗಿ ಇದ್ದು ಹಲವು ಸಮಸ್ಯೆಗಳು ಇಲ್ಲಿ ಮುಖ್ಯವಾಗಿರುವಾಗ ನಮ್ಮ ನವ್ಯ

೧. ಡಾ. ಎಸ್.ಸಿ. ಪಾಟೀಲ್, ವರ್ಣಸಂಚಯ, ಪುಟ.೨೯

ಪೀಳಿಗೆಗೆ ಈ ಕಲೆ ಹಾಗೂ ಕಲಾವಿದರ ಸಾಧನೆಗಳನ್ನು ಪರಿಚಯಿಸುವ ದಾಖಲೆಗಳು ತುಂಬಾ ಅಪರೂಪವಾಗಿವೆ.

ಸಾಂಸ್ಕೃತಿಕ ಕಲಾ ಇತಿಹಾಸ ಜಡವಾಗಿ ಯಾವ ಒಂದು ಕಾಲದ ಜನರಿಗೆ ಅಂಟಿಕೊಂಡು ಯಾವುದೇ ಸಾಂಪ್ರದಾಯಿಕ ಸಾಧನ ಶೈಲಿಗಳನ್ನು ಅನುಕರಿಸುತ್ತಾರೋ ಅಂತಹ ಜನರ ಜೀವನ ಮತ್ತು ಸಮಾಜ ಚೈತನ್ಯಮಯವಾಗಿ ಸಾಗಿಲ್ಲವೆಂದು ಹೇಳಬೇಕು. ಅಂತಹ ಜನ ಸಂಪ್ರದಾಯಗಳ ಗುಲಾಮರಾಗಿದ್ದಾರೆ. ಸ್ವಂತ ಚೇತನವನ್ನು ಮರೆತವರಾಗಿರಬೇಕು. ಬರಿಯ ಮಾರ್ಪಾಟಿನಿಂದಲೇ ಹೊಸ ಜೀವನದ ಒಂದು ಮುಖ್ಯ ಕುರುಹು ಕಲಾವಿದರಲ್ಲಿ ಅನುಭವ ವೈವಿಧ್ಯತೆ ಬಂದಂತೆ ಆತ ಚಿತ್ರಿಸಲು ಬಳಸುವ ಸಾಧನಗಳ ಮಾರ್ಪಾಟು ಆಗುತ್ತದೆ.[೨]

ಚಿತ್ರಕಲೆ ಪ್ರಾಚೀನವಾದ ಕಲೆ ಎಂಬುದರಲ್ಲಿ ಸಂದೇಹವಿಲ್ಲ. ಅದರಲ್ಲಿ ಭಾರತೀಯ ಚಿತ್ರಕಲೆ ಬಹು ಪ್ರಾಚೀನ ಎಂಬುವುದಕ್ಕೆ ಸಂಸ್ಕೃತ ಕಾವ್ಯಶಾಸ್ತ್ರ ಪುರಾಣಗಳಲ್ಲಿ ಪ್ರಮಾಣಿಭೂತ ವಾಕ್ಯಗಳು ಸಂದರ್ಭಗಳು ದೊರೆಯುತ್ತವೆ.[೩] ಪ್ರತಿಯೊಂದು ಕಲಾ ಮಾಧ್ಯಮಕ್ಕೂ ತನ್ನದೇ ಭಾವಲೋಕ, ಅರ್ಥಲೋಕ, ಸಹೃದಯ ಲೋಕಗಳಿವೆ ಎಂಬುದು ಸುಳ್ಳಲ್ಲ. ಎಲ್ಲಾ ಕಲೆಗಳ ಮೂಲ ಆಶ್ರಯವು ಒಂದೇ ಆದರೆ ಸಾಹಿತ್ಯ ಕಲೆಯೊಂದಿಗೆ ಹೋಲಿಸಿದಾಗ ಇತರೆ ಕೆಲವು ಲಲಿತಕಲೆಗಳ ವೈಶಿಷ್ಟ ಎದ್ದು ಕಾಣಿಸುತ್ತವೆ[೪] ಎಂಬ ಅಂಶಗಳು ಬೆಳಕಿಗೆ ಬರುತ್ತವೆ.

ಪ್ರಾಚೀನ ಭಾರತದಲ್ಲಿ ಚಿತ್ರಕಲೆಯ ಕುರಿತು ಪ್ರಾಸ್ತಾವಿಕವಾಗಿ ಹಲವು ಸಲ ಚಿತ್ರಕಲೆ ವಿಷಯವಾಗಿಯೇ ಸಾಹಿತ್ಯ ಗ್ರಂಥಗಳು ರಚನೆಗೊಂಡಿವೆ. ಈ ಪರಂಪರೆಯಲ್ಲಿಯೇ ನಿರ್ಮಾಣ ಗೊಂಡ ಕ್ರಿ.ಶ. ಸುಮಾರು ೩ನೇ ಶತಮಾನದ ವಾತ್ಸನ ಕಾಮಸೂತ್ರ ತುಂಬಾ ಪ್ರಸಿದ್ಧಿಯನ್ನು ಪಡೆದ ಗ್ರಂಥವಾಗಿದೆ. ಹೆಸರೇ ಸೂಚಿಸುವ ಹಾಗೇ ಈ ಕೃತಿ ಬರಿ ಕಾಮಕಲೆಯ ವರ್ಣಕೃತಿಯಲ್ಲ, ಅಲ್ಲಿ ವಿಜ್ಞಾನ, ತತ್ವಜ್ಞಾನ, ೬೪ ಕಲೆಗಳಂತಹ ವಿಷಯಗಳ ವಿವೇಚನೆ ಇದೆ. ಮನಸೋಲ್ಲಾಸ ಗ್ರಂಥಕೂಡ ಚಿತ್ರಕಲೆಯನ್ನು ಪರಿಚಯಸುತ್ತದೆ[೫] ಎಂಬುವುದನ್ನು ಮನಗಾಣಬಹುದು.

ಭಾರತೀಯರು ಕಲೆಯ ಮಹತ್ವವನ್ನು ಪ್ರಾಚೀನ ಕಾಲದಲ್ಲಿಯೇ ಅರಿತು ಅನೇಕ ಕಲಾವಿದರು ಕೃತಿ ನಿರ್ಮಾಣ ಮಾಡಿದ್ದಕ್ಕೆ ಅನೇಕ ನಿದರ್ಶನಗಳಿವೆ. ಸಂಶೋಧನೆ ಫಲವಾಗಿ ಮೆಹೆಂಜೋದರೋದಲ್ಲಿ ದೊರೆತ ಬಣ್ಣಹಾಕಿದ ವಿಗ್ರಹಗಳಿಂದ ೪೫೦೦ ವರ್ಷಗಳ ಹಿಂದೆಯೇ ವಿವಿಧ ಬಣ್ಣಗಳನ್ನು ಉಪಯೋಗಿಸಿ ವಸ್ತುಗಳನ್ನು ಅಲಂಕರಿಸುವುದು ರೂಢಿಯಲ್ಲಿತ್ತೆಂದು ತಿಳಿದುಬರುತ್ತದೆ.

ಅಜಂತದ ಗುಹೆಗಳಲ್ಲಿರುವ ಭಿತ್ತಿಚಿತ್ರಗಳು, ಮೂರ್ತಿಗಳು, ಬೌದ್ಧ ಧರ್ಮದಲ್ಲಿ ಕ್ರಿಸ್ತ ಪೂರ್ವದಲ್ಲಿಯೆ ಚಿತ್ರ ಬರಿಯಲ್ಪಟ್ಟಿವೆ ಎಂದು ಧೃಡಪಟ್ಟಿರುತ್ತದೆ. ಇದರಂತೆಯೆ ಪದುಕೋಟೆಯ

---

೨. ಡಾ. ಎಸ್.ಸಿ. ಪಾಟೀಲ್(ಸಂ) ಪ್ರೇಕ್ಷಕ ಕಲಾವಿದ ಹಾಗೂ ವಿಮರ್ಶಕ ಡಾ. ಶಿವರಾಮ ಕಾರಂತ (ಲೇ) ಚಿತ್ರಾಕ್ಷಿ. ಪುಟ.೨೩
೩. ಪಿ.ಆರ್. ತಿಪ್ಪೇಸ್ವಾಮಿ (ಪ್ರ.ಸಂ) ಚಿತ್ರಕಲಾ ಪ್ರಪಂಚ , ಪುಟ.೧೧೦)
೪. ಪ್ರೊ. ಎಂ.ಎಚ್. ಕೃಷ್ಣಯ್ಯ (ಸಂ) ಕಲೆ ಮತ್ತು ರಸ ಸ್ವಾದನೆ. ಪುಟ.೬೨)
೫. ಡಾ. ಎಸ್.ಸಿ. ಪಾಟೀಲ್(ಸಂ) ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು ಪುಟ.೧೪೪

ಬಳಿ ಇರುವ ಚಿತ್ತ ನಿವಾಸದಲ್ಲಿಯ ಪುರಾತನ ಭಿತ್ತಿಚಿತ್ರಗಳು ದೊರೆತಿವೆ. ಕೆಲವು ಪ್ರಾಚೀನ ದೇವಾಲಯಗಳಲ್ಲಿ ಕ್ರಿ.ಶ. ೭-ಲನೇ ಶತಮಾನಗಳಲ್ಲಿ ಬರೆದ ಅನೇಕ ಪೌರಾಣಿಕ ಮತ್ತು ಐತಿಹಾಸಿಕ ಚಿತ್ರಗಳು ಅಂದಿನ ಕಲಾಪ್ರತಿಭೆಯ ಪ್ರದರ್ಶನದಂತಿವೆ.[೬]

ಮಾನವ ಸಂಸ್ಕೃತಿಯಲ್ಲಿ ಕಲೆಗೆ ಅಗ್ರಸ್ಥಾನವಿದೆ. ಆದಿಕಾಲದಿಂದಲೂ ಮನುಷ್ಯನ ಕೈ ಹಿಡಿದುಕೊಂಡೆ ಬಂದಿದೆ. ಪ್ರತಿಭೆಯ ದಿಸೆಯಲ್ಲಿ ಅರಳಿ ನಿಲ್ಲುವ ಇದು ಅವನ ದಿನನಿತ್ಯದ ವ್ಯವಹಾರದಲ್ಲಿ ತೋರಿಬರುತ್ತದೆ. ತನ್ನನ್ನು ಅಲಂಕರಿಸಿಕೊಳ್ಳುವುದರಲ್ಲಿ ತನ್ನ ಕೆಲಸ ಕಾರ್ಯಗಳನ್ನು ಹಗುರ ಮಾಡಿಕೊಳ್ಳುವುದರಲ್ಲಿ ಶ್ರಮವನ್ನು ಮರೆತು ಕೆಲಕಾಲ ಆನಂದದಲ್ಲಿ ಮೈಮರೆಸುವ ಕಲೆ ಅವನಿಗೆ ಸಹಾಯಕ. ಅದು ಹಾಡಿನ ರೂಪದಲ್ಲಿರಬಹುದು, ಚಿತ್ರದ ರೂಪದಲ್ಲಿ ಬರಬಹುದು, ಕುಣಿತದ ರೂಪದಲ್ಲಿರಬಹುದು, ಬೆಳವಣಿಗೆಯನ್ನು ಪಡೆದುಕೊಂಡಂತೆ ರೂಪುಗೊಂಡು ಚಿತ್ರ ಶಿಲ್ಪ, ಸಾಹಿತ್ಯ, ನೃತ್ಯ, ನಾಟಕ ಮೊದಲಾದ ಲಲಿತಕಲಾ ಪ್ರಕಾರಗಳಲ್ಲಿ ಪ್ರೌಢ ಕಲೆಯಾಗಿ ಮಾರ್ಪಡಬಹುದು[೭] ಎಂಬ ಅಂಶಗಳು ಪೂರ್ವಕಾಲದ ಕಲಾ ಇತಿಹಾಸದ ಅಧ್ಯಯನದಿಂದ ಕಂಡುಬರುತ್ತದೆ.

ರಸ ಋಷಿ ಡಿ.ವಿ.ಜಿ.ಯವರು ಹೇಳಿದಂತೆ ಕಲೆಗಳಲ್ಲಿ ಪರಮ ಕಲೆ ಜೀವನದ ಲಲಿತ ಕಲೆ ಎಂಬುದು ಸಾರ್ಥಕವಾಗುತ್ತದೆ. ಚಿತ್ರಕಲೆ ಸಪ್ತಕಲೆಗಳ ದೃಷ್ಟಿಯಿಂದ ಹಿರಿಯ ಸ್ಥಾನ ಪಡೆದದ್ದು ನಿಜ. ಅತ್ತ ಚಿತ್ರಕಾರರ ಕುಂಚದ ಕೈಚಳಕದಲ್ಲಿ ಹತ್ತು ಬಗೆಯ ವರ್ಣರಂಜನಿಯ ಹೊಸ ಹೊಸಕಲೆಗಳು ಹೊರಚಿಮ್ಮುತ್ತವೆ. ಕಲೆಯ ನಿರ್ಮಾಣಕ್ಕೆ ಬೇಕಾಗುವ ಸಮನ್ವಯ ಪ್ರತಿಭೆಯನ್ನು ಕಲಾವಿದರು ಉಳಿಸಿಕೊಂಡು ಹೋಗುವ ಮನೋಧರ್ಮವನ್ನು ಬೆಳೆಸಿಕೊಂಡಲ್ಲಿ ಆಗ ತನ್ನದೆ ರಚಿತವಾದ ಚಿತ್ರಕಲೆ ಬ್ರಹ್ಮ ಸೃಷ್ಟಿ ನಿರ್ಮಿಸಬಲ್ಲದು. ಕಲೆಯಲ್ಲಿ ಸೌಂದರ್ಯ ತುಂಬುವ ಶಕ್ತಿ ಕಲಾರಾಧಕನಿಗೆ ಮಾತ್ರ ಸಾಧ್ಯ. ಅಂತೆಯೇ ಬಣ್ಣದ ಬದುಕಿನಲ್ಲಿ ಬಾಳಿ ಕಲ್ಪನಾ ಶಕ್ತಿಯಿಂದ ಅರಳಿದುದ್ದನ್ನು ಸಹ ಜೀವಂತವಾಗಿರಿಸುವ ಪ್ರತಿಭೆಯನ್ನು ಕಲಾವಿದ ಉಳಿಸುಕೊಂಡು ಹೋಗುವ ಮನೋಧರ್ಮವನ್ನು ಬೆಳೆಸಿಕೊಂಡಲ್ಲಿ ಆಗ ತನ್ನಿಂದ ರಚಿತವಾದ ಚಿತ್ರಕಲೆ ಬ್ರಹ್ಮ ನಿರ್ಮಿಸಬಲ್ಲನು. ಕಲೆಯಿಂದ ಸೌಂದರ್ಯ ತುಂಬುವ ಶಕ್ತಿ ಕಲಾರಾಧನಿಗೆ ಮಾತ್ರ ಸಾಧ್ಯ ಅಂತೆಯೇ ಬಣ್ಣದ ಬದುಕಿನಲ್ಲಿಯೆ ಬಾಳಿ ಕಲ್ಪನಾ ಶಕ್ತಿಯಿಂದ ಜೀವಂತವಾಗಿರುವ ಪ್ರತಿಭೆಯನ್ನು ಕಲಾವಿದ ಕುಂಚದಿಂದ ಚಿತ್ರಿಸಿರುವುದು ಜನರ ಕಣ್ಮನ ಸೆಳೆಯುವ ಚಿತ್ರಕಲೆಯಲ್ಲಿ ತನ್ನ ಅಪ್ರತಿಮ ಪ್ರತಿಭೆಯನ್ನು ಕಾಣಿಕೆಯಾಗಿ ನೀಡುತ್ತಾ ಬಂದಿದ್ದಾನೆ. ಇಂತಹ ಅನೇಕ ಕಲಾ ತಪಸ್ವಿಗಳು ಚಿತ್ತಾರ ಲೋಕಕ್ಕೆ ರೂವಾರಿಯಾಗಿದ್ದಾರೆ ಎಂಬುವುದನ್ನು ಕಲಾ ಇತಿಹಾಸದ ಅಧ್ಯಯನಗಳಿಂದ ತಿಳಿದುಕೊಳ್ಳಬಹುದಾಗಿದೆ.

ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ಇತಿಹಾಸದಲ್ಲಿ ಲಲಿತಕಲೆಗಳ ಪಾತ್ರ ತುಂಬಾ ಮೌಲಿಕವಾದದ್ದು. ಈ ನಾಡನ್ನು ಕಟ್ಟುವಲ್ಲಿ ಅನೇಕ ಜನರ ಪರಿಶ್ರಮದ ಬೆವರಿನ ಫಲ, ಅದರಲ್ಲಿ

೬. ಡಾ. ಎಸ್.ಸಿ. ಪಾಟೀಲ್(ಸಂ) ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು ಪುಟ.೧೩೩)

ಕಲಾವಿದನ ಪಾತ್ರವನ್ನು ನಿರ್ಲಕ್ಷಿಸುವಂತಿಲ್ಲ. ಚಿತ್ರ ಶಿಲ್ಪಕಲೆಗಳು ನಾಡಿನ ಅಮೂಲ್ಯ ಆಸ್ತಿಗಳಾಗಿವೆ. ಅಲ್ಲದೆ ಅವುಗಳು ಸಾವಿರಾರು ವರ್ಷದ ಇತಿಹಾಸವನ್ನು ಇಂದಿಗೂ ಸಾರಿ ಹೇಳುತ್ತವೆ. ಅವುಗಳ ಸಂರಕ್ಷಣೆಯ ದೃಷ್ಟಿಯಿಂದ ಹೆಚ್ಚಿನ ಪ್ರಮಾಣದಲ್ಲಿ ಅಧ್ಯಯನಗಳು ನಡೆಯದೇ ಇರುವುದು ಕಂಡುಬರುತ್ತದೆ. ನಾಡಿನ ಸಾಂಸ್ಕೃತಿಕ ಪರಂಪರೆಯ ಕಲಾವಿದರ ಕುರಿತಾದ ಅಧ್ಯಯನಗಳು ಗಮನಾರ್ಹವಾಗಿ ನಡೆಯಬೇಕಾಗಿದೆ.

ಕರ್ನಾಟಕ ಪ್ರದೇಶದಲ್ಲಿ ಹಲವಾರು ಕಲಾವಿದರು ತಮ್ಮ ಬದುಕನ್ನು ಕಲೆಗಾಗಿ ಮುಡಿಪಾಗಿಟ್ಟು ಕೊಂಡಿರುವ ಕಲಾವಿದರ ಕಲಾನಿದರ್ಶನಗಳು ನಮ್ಮಲ್ಲಿ ಸಾಕಷ್ಟಿದ್ದರೂ ಅವುಗಳ ಕುರಿತು ನಡೆದ ಚರ್ಚೆ, ವಿಮರ್ಶೆಗಳು ಸಂಶೋಧನೆಗಳು ತುಂಬಾ ಬೆರಳಣಿಕೆಯಷ್ಟು ಎಂದರೆ ಇಂತಹ ಪ್ರಮುಖ ಕಲಾವಿದರ ಅಧ್ಯಯನಗಳು ಇಂದು ನಡೆಯಬೇಕಿದ್ದು ರಾಷ್ಟ್ರೀಯ ಅಂತರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿ ಪಡೆದ ಅನೇಕ ಕಲಾಕೃತಿಗಳನ್ನು ನಿರ್ಮಿಸಿ ತಮ್ಮದೆ ಬಹುಮುಖ ವ್ಯಕ್ತಿತ್ವದಿಂದ ಕರ್ನಾಟಕ ಕಲಾ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆ ನೀಡಿ ಚಿತ್ರಕಲಾ ಕ್ಷೇತ್ರದಲ್ಲಿ ಎತ್ತರದ ಸಾಧನೆಯನ್ನು ಮಾಡಿದವರನ್ನು ಕಲಾ ಇತಿಹಾಸದಲ್ಲಿ ಕಾಣಬಹುದು.

## ಅಧ್ಯಯನದ ಉದ್ದೇಶ

ಕಲೆಯ ಬಗ್ಗೆ ಎಷ್ಟು ಹೇಳಿದರೂ ಸಾಲದು. ಅದೇ ರೀತಿಯಾಗಿ ಕರ್ನಾಟಕದ ಮಲೆನಾಡು ವ್ಯಾಪ್ತಿಯಲ್ಲಿರುವ ಶಿವಮೊಗ್ಗ ಜಿಲ್ಲೆಯು ಸಾಂಸ್ಕೃತಿಕವಾಗಿ ಸಿರಿ ಸಂಪತ್ತಿನ ಕಣಜ ಹಾಗೂ ಗೊಂಡಾರಣ್ಯಗಳು, ಅಪರೂಪದ ಪ್ರಾಣಿ–ಪಕ್ಷಿಗಳು, ಗಿಡಮೂಲಿಕೆಗಳು, ಭೋರ್ಗರೆಯುವ ವಿಶ್ವವಿಖ್ಯಾತ ಜೋಗ ಜಲಪಾತ, ಗಿರಿಧಾಮಗಳು, ಚಿತ್ರಕಲಾವಿದರು, ಶಿಲ್ಪಕಲಾವಿದರು ಮತ್ತು ಸಾಹಿತಿಗಳು ಮನಮೋಹಕ ವಾಸ್ತುಶಿಲ್ಪದ ದೇವಾಲಯಗಳಿಂದ ಚಾರಿತ್ರಿಕ ಮಹತ್ವ ಪಡೆದು ಕೊಂಡಿದೆ.

ಕರ್ನಾಟಕದಲ್ಲಿ ಕಾಣಿಸುವ ಎಲ್ಲ ಕಲಾಸಂಪತ್ತು ಈ ಜಿಲ್ಲೆಯಲ್ಲಿಯೆ ಕಾಣಿಸುತ್ತದೆ. ಎಂದರೂ ತಪ್ಪಲ್ಲ. ಐತಿಹಾಸಿಕವಾಗಿ ಶಿವಮೊಗ್ಗ ಜಿಲ್ಲೆಯು ಕರ್ನಾಟಕದಲ್ಲಿ ಅದ್ವಿತೀಯ ಸ್ಥಾನವನ್ನು ಪಡೆದಿದೆ. ಅಲ್ಲಿಯೇ ಹರಿಯುವ ತುಂಗಭದ್ರೆ ಈ ಜಿಲ್ಲೆಯ ನೆಲ–ಜಲ ಮತ್ತು ಪ್ರಕೃತಿಯು ರಾಜ್ಯ ಸ್ಥಾಪನೆಯಂತಹ ಮಹಾತ್ಕಾರ್ಯಕ್ಕೆ ಸ್ಫೂರ್ತಿ ನೀಡುತ್ತದೆ. ತಾಳಗುಂದದ ಕದಂಬರು ಹಾಗೂ ಕೆಳದಿಯ ಅರಸರು ಸ್ವಾತಂತ್ರ್ಯವಾಗಿ ಆಡಳಿತ ನಡೆಸಿದರು. ಗಂಗರು, ಶಾತವಾಹನರು ಮಾಂಡಲಿಕರಾಗಿದ್ದರು. ಹಾಗೆ ನಾಲ್ಕು ರಾಜ್ಯಗಳು ಮತ್ತು ಒಂಭತ್ತು ಪಾಳೆಯಪಟ್ಟುಗಳ ಸ್ಥಾಪನೆ. ಆಡಳಿತವು ಪ್ರಾಯಶಃ ಕರ್ನಾಟಕದಲ್ಲಿ ಅಪರೂಪವೆನ್ನಬಹುದಾದ ಇತಿಹಾಸವಷ್ಟೇ ಅಲ್ಲದೇ ಜಿಲ್ಲೆಯ ಸಾಹಿತ್ಯ, ಚಿತ್ರಕಲೆ, ಕೃಷಿ, ವಾಣಿಜ್ಯ, ಕೈಗಾರಿಕೆ, ವಿಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ಜಿಲ್ಲೆಯ ಕೊಡುಗೆಗಳನ್ನು ಲೇಖನಗಳ ಮೂಲಕ ಬೆಳಕಿಗೆ ತರಲು ಪ್ರಯತ್ನಿಸಿದೆ. ಜಿಲ್ಲೆಯಲ್ಲಿ ೧೧ನೆಯ ಶತಮಾನವರೆಗಿನ ಸಾಹಿತ್ಯ ದಾಖಲೆಗಳು ಅಜ್ಞಾತವಾಗಿವೆ. ಸಾಹಿತಿಗಳಾದ ಶಾಂತಿನಾಥನಿಂದ ಹಿಡಿದು ಕುವೆಂಪು, ಅನಂತಮೂರ್ತಿರವರೆಗೆ ಸಾಹಿತಿಗಳು

ಮತ್ತು ಕೃಷ್ಣಶೆಟ್ಟಿ ಅವರಂತಹ ಕಲಾವಿದರು ನಿರಂತರವಾಗಿ ಜಿಲ್ಲೆಯ ಸಾಂಸ್ಕೃತಿಕ ಬೆಳವಣಿಗೆ ತಮ್ಮನ್ನು ದುಡಿಸಿಕೊಂಡಿದ್ದಾರೆ.

ಸಾಹಿತ್ಯ ಕ್ಷೇತ್ರದಲ್ಲಿ ಕುವೆಂಪು ಅವರು ಮತ್ತು ಶ್ರೀ ಯು.ಆರ್. ಅನಂತಮೂರ್ತಿಯವರೆಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದೆ. ರಂಗಕರ್ಮಿ ನೀನಾಸಂನ ಶ್ರೀ ಕೆ.ವಿ. ಸುಬ್ಬಣ್ಣನವರೆಗೆ ರಾಷ್ಟ್ರಕವಿ ಜಿ.ಎಸ್.ಎಸ್. ಅವರಿಗೆ ಮನ್ನಣೆ ದೊರೆತಿದೆ. ಇವರೆಲ್ಲರೂ ಈ ಜಿಲ್ಲೆಯ ಪ್ರತಿಭಾನ್ವಿತರಾಗಿದ್ದು ಶೈಕ್ಷಣಿಕ ಕ್ಷೇತ್ರದಲ್ಲಿ ಜಿಲ್ಲೆಯು ಹಿಂದೆ ಬಿದ್ದಿಲ್ಲ ಎಂದು ಹೇಳಬಹುದು. ಕುವೆಂಪು ವಿಶ್ವವಿದ್ಯಾಲಯ ಸೇರಿದಂತೆ ಎಲ್ಲಾ ರೀತಿಯ ಶೈಕ್ಷಣಿಕ ಸಂಸ್ಥೆಗಳು ಪ್ರಗತಿ ಪಂಥದಲ್ಲಿದೆ[೨] ಎಂಬುದನ್ನು ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

ಹಾಗೆಯೇ ಕಲಾಕ್ಷೇತ್ರದ ಪ್ರಗತಿಯಲ್ಲಿ ಮುನ್ನುಗುತ್ತಿರುವ ಈ ಜಿಲ್ಲೆಯ ಶಿಲ್ಪ ಮತ್ತು ಚಿತ್ರಕಲಾವಿದರಾದ ಕೆ.ಜ್ಞಾನೇಶ್ವರ ಅವರು ಈ ಶಿವಮೊಗ್ಗ ಜಿಲ್ಲೆಯ ಹಿರಿಯ ಸಮಕಾಲೀನ ಕಲಾವಿದರಲ್ಲಿ ಪ್ರಮುಖರಾಗಿದ್ದಾರೆ. ಶಿಲ್ಪ ಮತ್ತು ಚಿತ್ರಕಲೆ ಎರಡರಲ್ಲೂ ಪರಿಣಿತಿಯನ್ನು ಹೊಂದಿದ್ದಾರೆ. ತಾಲ್ಲೂಕು ಪ್ರದೇಶದಿಂದ ಬಂದ ಇವರು ದಕ್ಷಿಣಕರ್ನಾಟಕದ ಕಲಾ ಬೆಳವಣಿಗೆಗೆ, ಕಲಾಚಟುವಟಿಕೆಗಳಲ್ಲಿ ತಮ್ಮ ಜೀವನವನ್ನು ಚಿತ್ರಕಲಾ ಕ್ಷೇತ್ರಕ್ಕೆ ಮೀಸಲಿಟ್ಟಿದ್ದಾರೆ. ಕೆ. ಜ್ಞಾನೇಶ್ವರ ಅವರ ಮುತ್ತಜ್ಜ ತಿಪ್ಪಾಜಿಯವರು ಮತ್ತು ತಾತ ಪರಶುರಾಮಪ್ಪ ಇವರ ಒಡನಾಟದಿಂದ ಕಲಾ ಪ್ರಪಂಚಕ್ಕೆ ಬಂದರು. ಅದೇರೀತಿಯಾಗಿ ಕೆ.ಜ್ಞಾನೇಶ್ವರ ಕಂಪನಿಯೊಂದರಲ್ಲಿ ಕಲಾವಿದರಾಗಿ ಕೆಲಸ ಮಾಡುತ್ತಿದ್ದರು ನಂತರದ ದಿನಗಳಲ್ಲಿ ಕಲಾಕ್ಷೇತ್ರದಲ್ಲಿ ಕೆ.ಜ್ಞಾನೇಶ್ವರ ಅವರು ಕರ್ನಾಟಕದ ಶಿಲ್ಪಕಲಾ ಅಕಾಡೆಮಿಯ ಸದಸ್ಯರಾಗಿ ತಮ್ಮ ಸೇವೆಯನ್ನು ಸಲ್ಲಿಸಿ ಕಲಾ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದಾರೆ. ಇವರ ಸೇವೆಯ ಪ್ರತಿ ಫಲವಾಗಿ ಇವರಿಗೆ ಅಕಾಡೆಮಿಯ ಪ್ರಶಸ್ತಿಗಳು, ಸಂಘಸಂಸ್ಥೆಗಳಿಂದ ಗೌರವಗಳು, ಸನ್ಮಾನಗಳು ಇವರಿಗೆ ಲಭಿಸಿವೆ. ಕೆ. ಜ್ಞಾನೇಶ್ವರ ಅವರ ಜೀವನ, ಸಾಧನೆ ಕಲಾ ಬದುಕು, ಕಲಾಕೃತಿಗಳು ಹಾಗೂ ಶಿಲ್ಪಗಳು ಮಾಡುವುದು ಮತ್ತು ಮುಖ್ಯವಾಗಿ ಹೇಳಬೇಕು ಎಂದರೆ ಪುಸ್ತಕಗಳ ಕಲಾವಿದರ ಕುರಿತು ವಿವರ ಮತ್ತು ಅವರ ಭಾವನ್ಮಾಕ ತುಡಿತಗಳನ್ನು ಹಾಗೂ ಪ್ರಕಟಿತ ವಿಮರ್ಶೆಗಳು ಇಂದು ನಾವು ಅಧ್ಯಯನ ಮಾಡಬೇಕಾದ ಸಂದರ್ಭಗಳು ಕಂಡುಬರುತ್ತವೆ. ದಾಖಲಿಸುವ ಕಾರ್ಯ ಮಾಡಬೇಕಾಗಿದೆ. ನಾಡಿನ ಉದ್ದಕ್ಕೂ ನಮ್ಮ ಕಲಾವಿದರ ಸಾಧನೆ ಕಲಾಜೀವನ ಕ್ಷೇತ್ರ ಸೇವೆ ಇವು ನಮ್ಮ ಗಮನಕ್ಕೆ ಎಷ್ಟೋ ಸಲ ಬಾರದೆ ಹೋಗಿವೆ. ಆದರೆ ಅವು ನಿರಂತರವಾಗಿ ಮುಂದಿನ ಜನಾಂಗಕ್ಕೂ ಪರಿಚಯವಾಗಬೇಕಾದರೆ ಅವರುಗಳ ಅಧ್ಯಯನವನ್ನು ಕಾರ್ಯರೂಪಕ್ಕೆ ತರುವುದು ಇಂದು ತೀರಾ ಅವಶ್ಯಕವಾಗಿದೆ. ಚಿತ್ರಕಲಾ ಕ್ಷೇತ್ರದಲ್ಲಿ ಅತ್ಯಂತ ಉನ್ನತ ಮಟ್ಟದ ಸಾಧನೆಗೈದ ಹಿರಿಯ ಕಲಾವಿದ ಕೆ. ಜ್ಞಾನೇಶ್ವರ ಅವರ ಜೀವನ ಸಾಧನೆಯು ಮತ್ತು ಚಿತ್ರಕಲಾ ಕ್ಷೇತ್ರಕ್ಕೆ ಅವರು

೨. ಚಿ.ಆರ್. ತಿಪ್ಪೇಸ್ವಾಮಿ(ಪ್ರ.ಸಂ) ಚಿತ್ರಕಲಾ ಪ್ರಪಂಚ, ಪುಟ.೩೦೮

ನೀಡಿದ ಕೊಡುಗೆಯನ್ನು ಅಧ್ಯಯನ ಮಾಡಿ ದಾಖಲೀಕರಣ ಮಾಡುವ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರುವಾಸಿಯಾದ ಕೆ. ಜ್ಞಾನೇಶ್ವರ ಅವರು ಪ್ರಮುಖ ಚಿತ್ರ ಮತ್ತು ಶಿಲ್ಪ ಕಲಾವಿದರಲ್ಲಿ ಒಬ್ಬರು. ಕೆ. ಜ್ಞಾನೇಶ್ವರ ಅವರ ಕಲಾಕೃತಿಗಳ ವಸ್ತುವಿಷಯ ತಂತ್ರಗಾರಿಕೆ ಶೈಲಿಯು ಇತರರಿಗಿಂತ ವಿಶಿಷ್ಟವಾಗಿದೆ. ಅವರು ಪಾಶ್ಚಾತ್ಯ ಕಲೆಯ ಸಿದ್ಧಾಂತಗಳನ್ನು ಮೆಚ್ಚಿಕೊಂಡರು ಹಾಗೂ ಭಾರತೀಯತೆಯ ಗ್ರಾಮೀಣ ಬದುಕನ್ನು ಮರೆತವರಲ್ಲ. ಅವರ ಕಲೆ ಕಲಾಕೃತಿಗಳಲ್ಲಿ ಗ್ರಾಮೀಣ ಜೀವನಶೈಲಿ ಮತ್ತು ಶಿಲ್ಪ ಕಲೆಯಲ್ಲಿ ದೇವಾನುದೇವತೆ ಮತ್ತು ದರ್ಪಣ ಸುಂದರಿ ಹೆಚ್ಚಾಗಿ ಹೇಳಬೇಕೆಂದರೆ ಮಲೆನಾಡು ಪ್ರದೇಶದಲ್ಲಿ ಬರುವ ದೇವಾಲಯಗಳಲ್ಲಿಯ ಶಿಲ್ಪಗಳ ಸೌಂದರ್ಯವನ್ನು ತಮ್ಮ ಕಲಾಕೃತಿಗಳಲ್ಲಿ ಬಳಸಿಕೊಂಡಿದ್ದಾರೆ. ಕೆ. ಜ್ಞಾನೇಶ್ವರ ಅವರ ಚಿತ್ರ ಮತ್ತು ಶಿಲ್ಪ ಕಲಾಕೃತಿಗಳಲ್ಲಿ ಹೆಚ್ಚಾಗಿ ವಾಸ್ತವಿಕ ಶೈಲಿಯಲ್ಲಿದ್ದು ಅವು ನೈಜವಾಗಿವೆ. ಇವರ ಎಲ್ಲ ಕಲಾಕೃತಿಗಳು ನೈಜವಾಗಿವೆ. ಪ್ರಮಾಣಬದ್ಧವಾಗಿ ನೋಡುಗನಲ್ಲಿ ರಸಾನುಭವವನ್ನು ನೀಡುತ್ತವೆ. ಆನಂದದಿಂದ ಸಹೃದಯಗಳನ್ನು ಸೆಳೆಯುತ್ತವೆ. ಅವರು ಪ್ರಯೋಗಶೀಲ, ಕ್ರಿಯಾತ್ಮಕ ಗುಣಗಳಿಂದ ಗಮನಾರ್ಹ ಕೃತಿಗಳನ್ನು ರಚಿಸಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಇವರ ಕಲಾಕೃತಿಗಳಿಗೆ ಅನೇಕ ಪ್ರಶಸ್ತಿ ಬಹುಮಾನಗಳು ದೊರಕಿವೆ. ಇವರ ಕೇಲವು ಚಿತ್ರಕಲೆ, ಶಿಲ್ಪಕಲೆ ಮತ್ತು ಫೈಬರ್ ಮಾಧ್ಯಮ ಹಾಗೆ ಟೇರಕೋಟದಲ್ಲಿ ವಿಶೇಷ ರೀತಿಯಲ್ಲಿ ಪರಣಿತರಾಗಿದ್ದಾರೆ, ಕೆ.ಜ್ಞಾನೇಶ್ವರ ಅವರು ರಚಿಸಿದ್ದ ರಾಧಾಕೃಷ್ಣ ಶಿಲ್ಪವು ಅಮೇರಿಕಾದ ನ್ಯೂಯಾರ್ಕ್ ನಗರದಲ್ಲಿ ಪೂಜಿಸಲ್ಪಡುತ್ತಿರುವುದು, ಅದೇ ರೀತಿಯಾಗಿ ಶೃಂಗೇರಿ ಮಠದ ಶ್ರೀ ಚಂದ್ರಶೇಖರ ಭಾರತಿ ಗುರುಗಳು ಮಣ್ಣಿನ ಮಾದರಿಯ ವಿಗ್ರಹ ಮತ್ತು ಶೃಂಗೇರಿಯ ಶಂಕರ ಮಠದಲ್ಲಿ ಶ್ರೀ ಶಂಕರ ಭಗವತ್ಪಾದರ ಭಾವಚಿತ್ರ ರಚಿಸಿದ್ದಾರೆ. ಇಂತಹ ಒಬ್ಬ ಪ್ರತಿಭಾವಂತ ಕಲಾವಿದರ ಕುರಿತು ಯಾವುದೇ ಅಧ್ಯಯನ ನಡೆಯದೇ ಇರುವುದು. ಹಿನ್ನೆಲೆಯಲ್ಲಿ ಕರ್ನಾಟಕದ ಹಿರಿಯ ಸಮಕಾಲೀನ ಕಲಾವಿದರ ಪಂಕ್ತಿಯಲ್ಲಿರುವ ಸುಮಾರು ೭೮ ವರ್ಷ ಹಿರಿಯ ಚಿತ್ರಕಲಾವಿದರಾದ ಕೆ. ಜ್ಞಾನೇಶ್ವರ ಅವರನ್ನು ಪರಿಚಯಿಸುವುದು ಮತ್ತು ಕಲಾ ಇತಿಹಾಸಕ್ಕೆ ದಾಖಲಿಸುವುದು ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. ನಾಡಿಗೆ ಚಿತ್ರಕಲಾ ಕ್ಷೇತ್ರದಲ್ಲಿ ದುಡಿದವರು, ಸಾಧನೆ ಮಾಡಿದವರ ಕುರಿತು ಅಧ್ಯಯನಗಳು ವಿರಾಳವಾಗಿವೆ ಎಂಬುದು ನಮಗೆ ತಿಳಿದ ವಿಷಯ ಆದುದರಿಂದ ವ್ಯಕ್ತಿ ಅಧ್ಯಯನದಲ್ಲಿ ಕೆ. ಜ್ಞಾನೇಶ್ವರ ಅವರ ಕಲೆ ಮತ್ತು ಬದುಕು ಕುರಿತು ಅಧ್ಯಯನ ಕೈಗೊಳುವುದು ಪ್ರಸ್ತುತ ಅಥವಾ ಸೂಕ್ತವೆನಿಸುತ್ತದೆ.

ಸುಮಾರು ೭೮ ವರ್ಷಗಳ ತಮ್ಮ ಜೀವನವೆಲ್ಲಾ ಕಲಾ ಬದುಕಿನಲ್ಲಿಯೇ ಕಳೆದರು. ಆವರ ಕುರಿತು ಅಧ್ಯಯನಗಳು ನಡೆದಿಲ್ಲ. ಆದುದರಿಂದ ಈ ಅಧ್ಯಯನವನ್ನು ಮಾಡಲಾಗಿ ಕೆ.ಜ್ಞಾನೇಶ್ವರ ಅವರು ಮಲೆನಾಡು ಕಂಡ ಅಭಿಜಾತ ಶಿಲ್ಪ ಮತ್ತು ಚಿತ್ರಕಲಾವಿದರಾಗಿದ್ದಾರೆ.

ಕರ್ನಾಟಕದಲ್ಲಿ ಇಂತಹ ಕಲಾವಿದರು ವಿರಳವೆನ್ನಬಹುದು ಮತ್ತು ಶಿವಮೊಗ್ಗದ ಸುತ್ತಲಿನ ನಿಸರ್ಗವನ್ನು ಸಮರ್ಥವಾಗಿ ಸುಂದರವಾಗಿ ತಮ್ಮ ಕಲೆಯಲ್ಲಿ ಮೂಡಿಸಿರುವರು ಅಷ್ಟೆ ಅಲ್ಲದೇ ಕೆ.ಜ್ಞಾನೇಶ್ವರ ಅವರು ಶಿವಮೊಗ್ಗದ ವಿಶೇಷವಾದ ಮತ್ತು ಪ್ರತಿಭಾನ್ವಿತ ವ್ಯಕ್ತಿಯೆಂದು ತಿಳಿದುಬರುತ್ತದೆ.

ಇಷ್ಟೆಲ್ಲಾ ಮಾಡಿದರೂ ಅವರು ಎಲೆಯ ಮರೆಯ ಹಣ್ಣಾಗಿಯೇ, ಹೂವಾಗಿಯೇ ಪರಿಮಳ ಬೀರುತ್ತಲಿದ್ದರೂ ಬಹುಜನರಿಂದ ಸಂಘ, ಸರಕಾರದವರಿಂದ ಗುರುತಿಸಲ್ಪಡದೇ ಇರುವುದರಿಂದ ಇಂತಹ ಮಹತ್ವದ ಕಲಾವಿದರನ್ನು ಬೆಳಕಿಗೆ ತರಲು ಹಾಗೂ ಮುಂದಿನ ತಲೆಮಾರುಗಳಿಗೆ ಮಲೆನಾಡು ಪ್ರದೇಶದಲ್ಲಿ ಇಂತಹ ಒಬ್ಬ ಅಭಿಜಾತ ಕಲಾವಿದರು ಇದ್ದರು ಎಂಬುದನ್ನು ದಾಖಲಿಸುವ ಪ್ರಯತ್ನವಾಗಬೇಕೆಂಬುದು ಈ ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ಸ್ವರೂಪ**

ಕೆ.ಜ್ಞಾನೇಶ್ವರವರ ಕಲೆ ಮತ್ತು ಬದುಕು ಕುರಿತು ಇರುವ ಅಧ್ಯಯನವನ್ನು ಆರು ಅಧ್ಯಾಯಗಳಲ್ಲಿ ವಿಂಗಡಿಸಿ ಪ್ರತಿಯೊಂದು ಅಧ್ಯಯನಗಳಲ್ಲಿ ಚರ್ಚಿಸುವ ವಿಷಯದ ವಿವರವನ್ನು ಸಂಕ್ಷಿಪ್ತ ಸ್ವರೂಪದಲ್ಲಿ ಈ ಕೆಳಗೆ ನೀಡಲಾಗಿದೆ.

**ಒಂದನೇ ಅಧ್ಯಾಯದಲ್ಲಿ** ಉದ್ದೇಶ, ಸ್ವರೂಪ, ವ್ಯಾಪ್ತಿ ವೈಧಾನಿಕತೆಗಳನ್ನು ಮತ್ತು ಆಕರ ಸಾಮಾಗ್ರಿಗಳ ಕುರಿತಾದ ವಿವರಣೆ ನೀಡಲಾಗಿದೆ.

**ಎರಡನೆಯ ಅಧ್ಯಾಯದಲ್ಲಿ** ಕೆ. ಜ್ಞಾನೇಶ್ವರ ಅವರು ಜನಿಸಿದ ಶಿಕಾರಿಪುರದ ಸಾಂಸ್ಕೃತಿಕ ಪರಿಸರದ ಹಿನ್ನೆಲೆಯೊಂದಿಗೆ ಅವರ ಪ್ರಾಥಮಿಕ ಶಿಕ್ಷಣದಿಂದ ಕಲಾಶಿಕ್ಷಣದವರೆಗಿನ ವಿವಿಧ ಮಜಲುಗಳನ್ನು ಕುರಿತು ವಿವಣಾತ್ಮಕವಾದ ಅಧ್ಯಯನ ನಡೆಸಲಾಗಿದೆ.

**ಮೂರನೆಯ ಅಧ್ಯಾಯದಲ್ಲಿ** ಕೆ. ಜ್ಞಾನೇಶ್ವರವರು ರಚಿಸಿದ ರೇಖಾಚಿತ್ರಗಳು ವೈವಿಧ್ಯಮಯವಾದ ವರ್ಣಚಿತ್ರಗಳನ್ನು ಹಾಗೂ ಶಿಲ್ಪ ಕಲಾಕೃತಿಗಳನ್ನು ವಿಶೇಷವಾಗಿ ವಿಂಗಡಿಸಿಕೊಂಡು ವಿವೇಚಿಸಲಾಗಿದೆ.

**ನಾಲ್ಕನೆಯ ಅಧ್ಯಾಯದಲ್ಲಿ** ಕೆ.ಜ್ಞಾನೇಶ್ವರವರ ರಚಿಸಿದ ರೇಖಾಚಿತ್ರಗಳು ವರ್ಣ ಕಲಾಕೃತಿಗಳನ್ನು ಮತ್ತು ಶಿಲ್ಪ ಕಲಾಕೃತಿಗಳ ಮೇಲಾದ ಪ್ರಭಾವ–ಪ್ರೇರಣೆ ಮತ್ತು ಕೆ.ಜ್ಞಾನೇಶ್ವರವರ ತಾವು ರಚಿಸಿದ ಕಲಾಕೃತಿಗಳಲ್ಲಿ ಯಾವ ರೀತಿ ವಸ್ತುವಿಷಯ, ತಂತ್ರಗಾರಿಕೆ, ಪ್ರಭಾವ ಪ್ರೇರಣೆ ಮತ್ತು ಶೈಲಿಯನ್ನು ಬಳಸಿದ್ದಾರೆ ಎಂಬುದನ್ನು ಕುರಿತು ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡಲಾಗಿದೆ.

**ಐದನೆಯ ಅಧ್ಯಾಯದಲ್ಲಿ** ಕೆ.ಜ್ಞಾನೇಶ್ವರವರ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಕಲಾವಿದರಾಗಿ ಕಾರ್ಯನಿರ್ವಹಿಸಿದ್ದು ಮತ್ತು ಅವರ ಮುಖ್ಯವಾದ ಕಲಾ ಚಟುವಟಿಕೆಗಳನ್ನು ಇಲ್ಲಿ ಗಮನಿಸಲಾಗಿದೆ. ಮತ್ತು ಅವರ ಸಂದರ್ಶನ ಕಲಾಕೃತಿಗಳ ವಿಮರ್ಶೆಗಳು ಪತ್ರಿಕೆಗಳಲ್ಲಿ ಬಂದ ಲೇಖನಗಳನ್ನು ಇಲ್ಲಿ ಪರಾಮರ್ಶಿಸಲಾಗಿದೆ.

**ಆರನೆಯ ಅಧ್ಯಾಯದಲ್ಲಿ** ಮೇಲಿನ ಐದು ಅಧ್ಯಾಯಗಳ ಫಲಿತಗಳ ಕುರಿತಾದ ಸಮೀಕ್ಷೆಯನ್ನು ಒಳಗೊಂಡಿರುತ್ತದೆ.

## ಅಧ್ಯಯನದ ವ್ಯಾಪ್ತಿ

ಜ್ಞಾನೇಶ್ವರವರು ಬಹುಮುಖ ಪ್ರತಿಭೆಯನ್ನು ಹೊಂದಿರುವ ಪ್ರಭುದ್ಧ ಚಿತ್ರಕಲಾವಿದರು. ಶಿಲ್ಪಕಲಾವಿದ, ಕಲಾಸಾಹಿತಿ ಹೀಗೆ ಆಯಾ ಕ್ಷೇತ್ರದಲ್ಲಿ ಗಣನೀಯ ಸಾಧನೆಯನ್ನು ಮಾಡಿದ ಸಾಧಕರಿವರು. ಇಲ್ಲಿ ಪ್ರಸ್ತುತ ಅಧ್ಯಯವು ಜ್ಞಾನೇಶ್ವರ ಅವರ ಚಿತ್ರಕಲೆ, ಸಾಧನೆಯ ಕುರಿತಾಗಿ ಕೇಂದ್ರಿಕೃತವಾಗಿದ್ದು ವಿಶೇಷವಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅವರ ಇತರ ಕಲಾಪ್ರಕಾರಗಳನ್ನು ಸ್ಥೂಲವಾಗಿ ಹೇಳಲಾಗಿದೆ.

ಕೆ.ಜ್ಞಾನೇಶ್ವರ ಅವರು ತಮ್ಮ ಬದುಕಿನುದ್ದಕ್ಕೂ ರಚಿಸಿದ ಕಲಾಕೃತಿಗಳು ಸಾವಿರಾರು. ಅವುಗಳು ವೈವಿಧ್ಯಮಯವಾಗಿದ್ದು, ಈ ಕಲಾಕೃತಿಗಳು ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಸಂಗ್ರಹಗೊಂಡಿವೆ. ಜ್ಞಾನೇಶ್ವರ ಅವರ ಅನೇಕ ಕಲಾಕೃತಿಗಳು ಮಾರಾಟವಾಗಿವೆ. ಕಳೆದುಹೋಗಿವೆ ಹಾಗೂ ಇನ್ನಿತರ ಕಾರಣಗಳಿಂದಾಗಿಯೂ ಅವರ ಎಲ್ಲಾ ಕಲಾಕೃತಿಗಳು ಲಭ್ಯವಾಗಿಲ್ಲದಿರುವುದು ವಿಷಾದನೀಯ ಸಂಗತಿಯಾಗಿದೆ. ಗ್ರಂಥಗಳ ಅಧ್ಯಯನದ ಅವಧಿಯಲ್ಲಿ ಲಭ್ಯವಾದ ಕಲಾಕೃತಿಗಳ ಆಳವಾದ ಅಧ್ಯಯನ ಮಾಡುವ ಪ್ರಯತ್ನವಾಗಿದೆ. ೭೫ ವಯೋಮಾನದ ಜ್ಞಾನೇಶ್ವರ ಅವರು ತಮ್ಮ ಬದುಕಿನುದ್ದಕ್ಕೂ ಅವಿರತವಾಗಿ ಬಿಡುವಿಲ್ಲದೆ ಕಲಾಕೃತಿಗಳನ್ನು ರಚಿಸುತ್ತಾ ಬಂದಿದ್ದಾರೆ. ಈಗಲೂ ಕೂಡಾ ಅವರು ಕಲಾಕೃತಿಗಳನ್ನು ರಚಿಸುವುದರಲ್ಲಿ ನಿರತವಾಗಿರುವುದು ಕಂಡುಬರುತ್ತದೆ. ಆದರೆ ನನ್ನ ಅಧ್ಯಯನಕ್ಕೆ ಅವಧಿಯ ಮಿತಿಯಿರುವುದರಿಂದ ೨೦೧೨ರ ವರೆಗಿನ ಜ್ಞಾನೇಶ್ವರವರ ಕಲಾಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಿ ಸೀಮಿತ ಅವಧಿಯಲ್ಲಿ ಲಭ್ಯವಿರುವ ಕಲಾಕೃತಿಗಳನ್ನು ಅಧ್ಯಯನದ ವ್ಯಾಪ್ತಿಗೆ ಬಳಸಿಕೊಳ್ಳಲಾಗಿದೆ. ಜೊತೆಗೆ ಅವರ ಸಮಕಾಲೀನ ಕಲಾವಿದರು ಸ್ನೇಹಿತರೂ ಮನೆಯ ರಕ್ತಸಂಬಂಧಿಗಳೂ ಹಾಗೂ ಅವರು ಕಲಾಕೃತಿಯ ವಿಸ್ತರಿಸಿದ ಸ್ಥಳಗಳನ್ನು ಪ್ರಮುಖವಾಗಿ ಅಧ್ಯಯನದ ವ್ಯಾಪ್ತಿಯಾಗಿ ತೆಗೆದುಕೊಳ್ಳಲಾಗಿದೆ.

## ಅಧ್ಯಯನದ ವೈಧಾನಿಕತೆ

ವ್ಯಕ್ತಿ ಅಧ್ಯಯನದಲ್ಲಿ ಕ್ಷೇತ್ರಕಾರ್ಯವು ಬಹುಮುಖ್ಯ ಪಾತ್ರವಹಿಸುತ್ತದೆ. ವ್ಯಕ್ತಿ ಅಧ್ಯಯನದ ವಿಧಾನದಲ್ಲಿ ಚಿತ್ರಕಲಾವಿದ ಕೆ.ಜ್ಞಾನೇಶ್ವರ ಅವರ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಎರಡು ರೀತಿಯ ಆಕರಗಳನ್ನು ಬಳಸಿಕೊಳ್ಳಲಾಗಿದೆ.

೧. ಮೂಲ ಆಕರ ಸಾಮಾಗ್ರಿ

೨. ಆನುಷಂಗಿಕ ಆಕರ ಸಾಮಾಗ್ರಿ

ಈ ಎರಡು ಮೂಲದಿಂದ ವಿಷಯ ಸಂಗ್ರಹ ಮಾಡಲಾಗಿದೆ.

### ೧. ಮೂಲ ಆಕರ ಸಾಮಗ್ರಿ:

ಮೂಲ ಸಾಮಗ್ರಿಯಲ್ಲಿ ಮುಖ್ಯವಾದುದು ಕ್ಷೇತ್ರಕಾರ್ಯ. ಸ್ವತ: ಕಲಾವಿದರ ಸಂದರ್ಶನ ನಡೆಸಿ ಅದರೊಂದಿಗಿನ ಚರ್ಚೆ, ಕಲಾಕೃತಿಗಳ ಛಾಯಾಚಿತ್ರಣ ಮಾಡುವುದು ಅವರ

ಸಮಕಾಲೀನವರ ಸಂದರ್ಶನಗಳು ಹಾಗೂ ಸಂಗ್ರಹಿತ ವಿಷಯಗಳ ಪಟ್ಟಿ ಸಿದ್ಧಪಡಿಸಿ ವಿವಿಧ ರೂಪದಲ್ಲಿ ಅಧ್ಯಯನ ಮಾಡಲಾಗಿದೆ.

**ಅ. ಸಂದರ್ಶನ**

ಶಿಕಾರಿಪುರದಲ್ಲಿ ಜನಿಸಿದ ಕಲಾವಿದ ಕೆ. ಜ್ಞಾನೇಶ್ವರ ಅವರು ಸಂದರ್ಶಿಸಿ ಅವರ ಬಾಲ್ಯದ ಪ್ರಾಥಮಿಕ ಶಿಕ್ಷಣ ಅಂದಿನ ಸನ್ನಿವೇಶದಲ್ಲಿ ಕಲೆಯ ಕಡೆ ಅವರ ಮನಸ್ಸು ಆಕರ್ಷಿತವಾದ ಬಗೆ, ಪ್ರೇರಣೆ ನೀಡಿದ ವ್ಯಕ್ತಿಗಳು, ಮಲೆನಾಡಿನ ಪರಿಸರ ಮತ್ತು ಅಲ್ಲಿನ ಆಚರಣೆಗಳು ಇವರ ಮೇಲೆ ಹೇಗೆ ಪ್ರಭಾವ ಬೀರಿದವು ಹಾಗೂ ಅವರ ಕೌಟುಂಬಿಕ ಹಿನ್ನೆಲೆಯನ್ನು ಸಂಗ್ರಹಿಸಲಾಗಿದೆ. ನಂತರ ಪ್ರೌಢಶಾಲಾ ವ್ಯಾಸಂಗ, ಕಲಾಶಿಕ್ಷಣ ಮತ್ತು ಆ ಸಂದರ್ಭದಲ್ಲಿ ರಚಿಸಿದ ಕಲಾಕೃತಿಗಳ ಹಿನ್ನೆಲೆಯ ಅನುಭವಗಳನ್ನು ವಿಶ್ಲೇಷಿಸಲಾಗಿದೆ.

ಜ್ಞಾನೇಶ್ವರ ಅವರು ಕಲಾ ಪ್ರಪಂಚಕ್ಕೆ ಬರಲು ಕಾರಣರಾದ ಅವರ ಮುತ್ತಾತ ತಿಪ್ಪಾಜಿಯವರ ಬಗ್ಗೆ ಮತ್ತು ಕೆ.ಜ್ಞಾನೇಶ್ವರ ಅವರ ಕಲಾ ಶಿಕ್ಷಣವನ್ನು ನೀಡಿದ ಗುರುಗಳ ಬಗ್ಗೆ ಮತ್ತು ಮುಖ್ಯವಾಗಿ ಕೆ.ಜ್ಞಾನೇಶ್ವರ ಅವರ ಕಲಾಕೃತಿಗಳ ಅಭಿವ್ಯಕ್ತಿಯ ಕುರಿತು ಅವರ ಅನಿಸಿಕೆಗಳನ್ನು ರಚನೆಯ ಹಿನ್ನೆಲೆ, ಪ್ರಭಾವ–ಪ್ರೇರಣೆ ಸಂದರ್ಶನದ ಮೂಲಕ ಸಂಗ್ರಹಿಸಿ ಮೂಲ ಸಂಶೋಧನ ಸಂಪ್ರಬಂಧಕ್ಕೆ ಬಳಸಿಕೊಳ್ಳಲಾಗಿದೆ.

**ಬ. ಛಾಯಾಚಿತ್ರಣ**

ಜ್ಞಾನೇಶ್ವರರು ತಮ್ಮ ಬದುಕಿನುದ್ದಕ್ಕೂ ಸಾವಿರಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ದೇಶ–ವಿದೇಶಗಳಿಗೆ ಮಾರಾಟವಾಗಿವೆ. ಕೆಲವು ಕೆ. ಜ್ಞಾನೇಶ್ವರವರ ಸಂಗ್ರಹದಲ್ಲಿವೆ. ವಿದ್ಯಾರ್ಜನೆಯ ಸಂದರ್ಭದಲ್ಲಿ ರಚಿಸಿದ ಕಲಾಕೃತಿಗಳು ಇಲ್ಲಿವಾಗಿದ್ದರೆ, ನಂತರ ಕಲಾವಿದರಾಗಿದ್ದಾಗ ರಚಿಸಿದ ಕಲಾಕೃತಿಗಳು ಹಲವಾರು. ಅವುಗಳಲ್ಲಿ ರೇಖಾಚಿತ್ರಗಳು, ವಿವಿಧ ಮಾಧ್ಯಮದ ವರ್ಣಚಿತ್ರಗಳು ವುಡ್‌ಕಟ್, ಪ್ಲಾಸ್ಟರ್ ಆಫ್ ಪ್ಯಾರೀಸ್‌ನಲ್ಲಿ ಮತ್ತು ಕಾಷ್ಟ ಕಲ್ಲಿನಲ್ಲಿ ರಚಿಸಿದ ಶಿಲ್ಪಗಳು ಈ ವಿಷಯಗಳನ್ನು ವಿಂಗಡಿಸಿಕೊಂಡು ಅವುಗಳನ್ನು ಸ್ವತಃ ನೋಡಿ ಅವುಗಳು ಇರುವ ಸ್ಥಳಗಳಿಗೆ ಹೋಗಿ ಛಾಯಾಚಿತ್ರಣ ಮಾಡಿಸಿ ಮೂಲ ಸಂಶೋಧನೆಗೆ ಬಳಸಿಕೊಳ್ಳಲಾಗಿದೆ.

**೨. ಆನುಷಂಗಿಕ ಆಕರ ಸಾಮಗ್ರಿ**

ದೃಶ್ಯಕಲಾ ಸಂಶೋಧನಾ ಮಹಾ ಪ್ರಬಂಧಗಳು, ನಿಘಂಟುಗಳು ಮತ್ತು ವಿಶ್ವಕೋಶಗಳು, ಪತ್ರಿಕೆಗಳು ಕಲಾವಿದರ ಕಲಾಕೃತಿಗಳನ್ನುದ್ದೇಶಿಸಿ ಪ್ರಕಟವಾದ ಕಲಾವಿಮರ್ಶೆ ಮತ್ತು ಅಭಿಪ್ರಾಯಗಳು, ಲೇಖನಗಳು ಅಭಿನಂದನ ಗ್ರಂಥಗಳು, ಸಂಶೋಧನಾ ಲೇಖನಗಳು ಇತ್ಯಾದಿ ರೀತಿಯ ಆನುಷಂಗಿಕ ಆಕರ ಸಾಮಗ್ರಿಗಳನ್ನು ಸಂಶೋಧನ ವಿಷಯಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**ಅಧ್ಯಾಯ ಎರಡು:** ಬಾಲ್ಯದ ಸಾಂಸ್ಕೃತಿಕ ಪರಿಸರ ಮತ್ತು ಕಲಾಬದುಕು. ಈ ಅಧ್ಯಾಯದಲ್ಲಿ ಕೆ. ಜ್ಞಾನೇಶ್ವರವರ ಜನ್ಮಸ್ಥಳದ ಸಾಂಸ್ಕೃತಿಕ ಪರಿಸರ ಬಾಲ್ಯ ಜೀವನ ತಂದೆ–

ತಾಯಿ, ಕೌಟುಂಬಿಕ ಹಿನ್ನೆಲೆ, ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣ ಹಂತಗಳಲ್ಲಿ ಕಲೆಯ ಕಡೆಗೆ ಹರಿದ ಅವರ ಮನಸ್ಸು, ಅಲ್ಲಿ ಕಲೆಯ ಕುರಿತಾಗಿ ಪ್ರೇರಣೆ ನೀಡಿದ ಪ್ರಾಥಮಿಕ ಶಾಲಾ ದಿನಗಳು ಕೆ. ಜ್ಞಾನೇಶ್ವರವರ ಬಾಲ್ಯದಲ್ಲಿನ ಕಲಾಚಟುವಟಿಕೆಗಳು ಊರಿನಲ್ಲಿ ನಡೆಯುತ್ತಿದ್ದ ಹಬ್ಬ ಹರಿದಿನಗಳ ಆಚರಣೆಗಳು ಹಾಗೂ ಆ ಸಂದರ್ಭದಲ್ಲಿ ಮನೆಯ ಮುಂದೆ ಹಾಕುತ್ತಿದ್ದ ರಂಗೋಲಿಗಳು ಮುಖ್ಯವಾಗಿ ಅವರ ಮುತ್ತಾತ ತಿಪ್ಪಾಜಿಯವರು ಕಲಾಕೃತಿಯನ್ನು ರಚಿಸುತ್ತಿದ್ದುದು ಕೆ. ಜ್ಞಾನೇಶ್ವರವರ ಕಲಾರಚನೆಗಳಿಗೆ ಪ್ರೇರಣೆಯಾಗಿವೆ. ಅವುಗಳಿಂದ ಆಕರ್ಷಿತವಾಗಿ ಕೆ. ಜ್ಞಾನೇಶ್ವರವರ ಮನಸ್ಸು ಕಲೆಯ ಕಡೆಗೆ ತಿರುಗಿದ ರೀತಿ ಬಾಲ್ಯದ ದಿನಗಳಲ್ಲಿ ಮಲೆನಾಡಿನಲ್ಲಿರುವ ದೇವಾಲಯಗಳ ಶಿಲ್ಪಕಲೆಯ ಸೌಂದರ್ಯ ಮತ್ತು ವಿಶೇಷ ರೀತಿಯ ಎಂದಿಗೂ ಹಸಿರಾಗಿರುವ ಮಲೆನಾಡಿನ ಪರಿಸರ ಕೋಟೆ ಗೊಂಡಾರಣ್ಯಗಳಲ್ಲಿ ತಿರುಗಾಡಿದ ಆ ದಿನಗಳ ಅನುಭವ ಮನೆಯಲ್ಲಿಯೂ ಕುಟುಂಬ ವರ್ಗದವರು ಅವರ ಕಲೆಯನ್ನು ಪ್ರೋತ್ಸಾಹಿಸಿದ್ದು ಇವೆಲ್ಲಾ ಈ ಕಲಾಭಿರುಚಿಯನ್ನು ಬೆಳೆಸಿಕೊಂಡು ಬಂದ ಕುತೂಹಲಕಾರಿಯಾದ ಅಂಶಗಳು ಈ ಅಧ್ಯಾಯದಲ್ಲಿ ಚರ್ಚಿತಗೊಂಡಿವೆ.

**ಅಧ್ಯಾಯ ಮೂರು**

ಕೆ. ಜ್ಞಾನೇಶ್ವರವರ ಕಲಾಕೃತಿಗಳ ವಿಂಗಡನೆ

೧.ರೇಖಾಚಿತ್ರ, ೨. ವರ್ಣಚಿತ್ರ, ೩. ಶಿಲ್ಪಕಲೆ,

**೧. ರೇಖಾಚಿತ್ರಗಳು**

ರೇಖಾ ಚಿತ್ರಗಳು ಚಿತ್ರಕಲೆಯ ತಾಯಿ ಬೇರಿದ್ದಂತೆ. ರೇಖೆಗಳಿಲ್ಲದೆ ಯಾವುದೇ ಚಿತ್ರ ಪೂರ್ಣಗೊಳ್ಳುವುದಿಲ್ಲ, ವರ್ಣಚಿತ್ರವಾಗಿರಲಿ, ಶಿಲ್ಪ ಕಲಾಕೃತಿಯಾಗಿರಲಿ, ಇನ್ನಾವುದೇ ಚಿತ್ರವಾಗಿರಲಿ ಅಲ್ಲಿ ರೇಖೆಯ ಸಾಂಗತ್ಯ ಇರಬೇಕು. 'ಕಲಾವಿದನೊಬ್ಬನನ್ನು ಬಯಲು ಮಾಡುವುದು ಅವನ ರೇಖಾಚಿತ್ರಗಳು. ಅದು ಅವನ ಸಹಿ ಇದ್ದಂತೆ' ಎನ್ನುವ ಮಾತು ಕಲಾವಲಯದಲ್ಲಿ ಪ್ರಚಲಿತ ವಾಗಿರುವುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಕೆ. ಜ್ಞಾನೇಶ್ವರರ ರೇಖಾಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕೆ. ಜ್ಞಾನೇಶ್ವರವರು ಈವರೆಗೆ ರಚಿಸಿದ ಅಸಂಖ್ಯಾತ ರೇಖಾಚಿತ್ರಗಳು ಅವರ ಕಲಾಭಿವ್ಯಕ್ತಿಗೆ ಬೆನ್ನೆಲುಬಾಗಿ ನಿಂತಿವೆ. ನಿತ್ಯ ರಚಿಸುವ ರೇಖಾಚಿತ್ರಗಳು ಅನೇಕ ಸಂಯೋಜನಾ ಕಲಾಕೃತಿಗಳ ಹುಟ್ಟಿಗೆ ಕಾರಣವಾಗಿವೆ. ಕೆ. ಜ್ಞಾನೇಶ್ವರವರು ಸಾಂಪ್ರಾದಾಯಿಕ ಶೈಲಿಯ ರೇಖಾಚಿತ್ರಗಳನ್ನು ರಚಿಸುತ್ತ ಬಂದಿದ್ದಾರೆ.

**೨. ವರ್ಣಚಿತ್ರ ಕಲಾಕೃತಿಗಳು**

ಯಾವುದೇ ಸನ್ನಿವೇಶದಲ್ಲಿನ ಚಿತ್ರಕಲೆ ಆಯಾಕಾಲದ ಬದುಕಿನ ದಟ್ಟ ಪ್ರಭಾವವನ್ನು ಕೃತಿಗಳ ಮುಖೇನ ಹೊರಹಾಕುತ್ತವೆ. ಈ ಮಾತು ಕೆ. ಜ್ಞಾನೇಶ್ವರವರಿಗೆ ಅಕ್ಷರ ಸಹ ಅನ್ವಯವಾಗುತ್ತದೆ. ಬಹುಪಾಲು ಕಲಾಕೃತಿಗಳು ಅವರ ಬದುಕಿನ ದಟ್ಟ ಪ್ರಭಾವವನ್ನು

ಮೈಗೂಡಿಸಿಕೊಂಡೆ ಅಭಿವ್ಯಕ್ತಗೊಂಡಿವೆ. ಇಲ್ಲಿ ರೇಖಾಚಿತ್ರಗಳಂತೆ ಸಾವಿರಾರು ವರ್ಣಚಿತ್ರಗಳನ್ನು ಕೆ. ಜ್ಞಾನೇಶ್ವರವರು ರಚಿಸಿದ್ದಾರೆ. ಇಲ್ಲಿ ಸಮಾಜಮುಖಿಯಾಗಿರುವ ಕೃತಿಗಳು ಒಂದಿಷ್ಟಿದ್ದರೆ, ಸಂಸ್ಕೃತಿಮುಖಿಯಾಗಿರುವ ಕೃತಿಗಳು ಹಲವು. ಬಹುಮುಖಿಯಾಗಿ ರಚಿಸಿರುವ ಕೆ. ಜ್ಞಾನೇಶ್ವರವರ ಈವರೆಗಿನ ವರ್ಣಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸುವುದೆಂದರೆ ನಮ್ಮ ಸಂಸ್ಕೃತಿಯ ಜಾಡು ಕಂಡುಹಿಡಿಯಲು ಹೊರಟಂತೆ ಪ್ರಯೋಗಶೀಲತೆಯನ್ನು ಮೈಗೂಡಿಸಿಕೊಂಡು ಅವರ ಬಹುವಿಧವಾದ ಕಲಾಕೃತಿಗಳು ಆಂತರಿಕ ಸಂಬಂಧವನ್ನು ಹೊಂದಿವೆ. ಇಂತಹ ಕಲಾಕೃತಿಗಳನ್ನು ಕುರಿತು ವಿಮರ್ಶಾತ್ಮಕವಾಗಿ ಅಧ್ಯಯನ ನಡೆಸುವ ಪ್ರಯತ್ನ ಮಾಡಲಾಗಿದೆ.

ರಾಜಕೀಯ, ಸಾಮಾಜಿಕ, ಶೃಂಗಾರ ಬದುಕಿನ ಘಟನೆಗಳು, ವ್ಯಕ್ತಿ ಸಂಬಂಧಗಳು, ವೈಯಕ್ತಿಕ ಬದುಕು, ಸಾಮುದಾಯಿಕ ಬದುಕಿನ ಚಿಂತನೆಗಳಲ್ಲಿ ಸೃಜನಶೀಲ ರೂಪದಲ್ಲಿ ಕೆ. ಜ್ಞಾನೇಶ್ವರವರಿಂದ ರಚನೆಗೊಂಡಿರುವ ವಿವಿಧ ಮಾಧ್ಯಮಗಳಲ್ಲಿ ವ್ಯಕ್ತವಾದ ಅವರ ಸಂಯೋಜನೆ ಭಾವಚಿತ್ರಗಳು ವ್ಯಕ್ತಿ ಚಿತ್ರಗಳು ಸಂಯೋಜನಾ ಚಿತ್ರಗಳನ್ನು ಒಳಗೊಂಡ ವಿಶ್ಲೇಷಣೆಯನ್ನು ಆಯ್ದ ಕಲಾಕೃತಿಗಳೊಂದಿಗೆ ಈ ಅಧ್ಯಾಯದಲ್ಲಿ ಮಾಡಲಾಗಿದೆ. ಅಲ್ಲದೆ ಅವರು ಸಂಯೋಜನೆಯಲ್ಲಿ ದುಡಿಸಿಕೊಂಡ ವರ್ಣರೇಖೆ ಮತ್ತು ಲಯಗಳನ್ನು ಸಾಂದರ್ಭಿಕವಾಗಿ ಚರ್ಚಿಸಲಾಗಿದೆ. ಕೆ.ಜ್ಞಾನೇಶ್ವರ ಅವರ ವರ್ಣ ಕಲಾಕೃತಿಗಳನ್ನು ಅಧ್ಯಯನದ ಅನುಕೂಲತೆಗಾಗಿ ಈ ಕೆಳಗಿನಂತೆ ವರ್ಗೀಕರಿಸಿಕೊಂಡು ವಿಶ್ಲೇಷಿಸಲಾಗಿದೆ.

೧. ಜಲವರ್ಣ ಚಿತ್ರಕಲಾ ಕೃತಿಗಳು
೨. ಪೋಸ್ಟರ್ ವರ್ಣ ಚಿತ್ರಕಲಾ ಕೃತಿಗಳು
೩. ಕೌಯನ್ಸ ವರ್ಣ ಚಿತ್ರಕಲಾ ಕೃತಿಗಳು
೪. ಅಕ್ರಲೀಕ್ ವರ್ಣ ಚಿತ್ರಕಲಾ ಕೃತಿಗಳು
೫. ತೈಲವರ್ಣ ಚಿತ್ರಕಲಾ ಕೃತಿಗಳು
೬. ವಿಶ್ರ ಮಾಧ್ಯಮದ ಚಿತ್ರಕಲಾ ಕೃತಿಗಳು
೭. ಭಿತ್ತಿಚಿತ್ರ ಮತ್ತು ಶಿಲ್ಪಕಲಾ ಕೃತಿಗಳು

**ಶಿಲ್ಪ ಕಲಾಕೃತಿಗಳು**

ನಮ್ಮ ಚರಿತ್ರೆಯ ಕಾಲದ ಶಿಲ್ಪ ಸಂಸ್ಕೃತಿಯಂದ ಹಿಡಿದು ಇಂದಿನ ಆಧುನಿಕ ಶಿಲ್ಪ ಸಂಸ್ಕೃತಿಯ ಬೆಳವಣಿಗೆಯನ್ನು ಸ್ಥೂಲವಾಗಿ ನೋಡಿದರೆ ಕಾಲದಿಂದ ಕಾಲಕ್ಕೆ ಶಿಲ್ಪ ನಿರ್ಮಾಣದ ಹಿಂದಿನ ಉದ್ದೇಶಗಳು ಬದಲಾಗುತ್ತದೆ. ರೂಪಗಳೆಲ್ಲವು ಮೂರ್ತದಿಂದ ಅಮೂರ್ತದೆಡೆಗೆ ಪರಿವರ್ತನೆಗೊಂಡ ಸಧ್ಯಾತೆಗಳನ್ನು ಕಲಾಕ್ಷೇತ್ರದಲ್ಲಿ ಕಾಣಬಹುದಾಗಿದೆ. ಆದರು ಈಗಲೂ ಕೆ. ಜ್ಞಾನೇಶ್ವರವರ ಸಾಂಪ್ರಾದಾಯಿಕ ಶಿಲ್ಪಗಳನ್ನು ರಚಿಸುತ್ತಿದ್ದಾರೆ. ಎಷ್ಟೇ ಕಾಲಗಳು ಬದಲಾದರೂ ಕೆ. ಜ್ಞಾನೇಶ್ವರವರು ತಮ್ಮ ಸಂಸ್ಕೃತಿಯಂತೆ ನಡೆಯುವುದನ್ನು ಅವರ ಶಿಲ್ಪಿ ಕಲಾಕೃತಿಯಿಂದ ನಮಗೆ ತಿಳಿಯುತ್ತದೆ. ಕೆ. ಜ್ಞಾನೇಶ್ವರವರು ಲಕ್ಷ್ಮಿ, ಗಣೇಶ, ರಾಘವೇಂದ್ರ, ಆಂಜನೇಯ ಹೀಗೆ

ಇನ್ನು ಹಲವು ರೀತಿಯ ಶಿಲ್ಪಿಗಳನ್ನು ಕೆತ್ತನೆ ಮಾಡಿದ್ದಾರೆ ಮತ್ತು ವಿವಿಧ ರೀತಿಯ ಕಲ್ಲಿನಲ್ಲಿ ಶಿಲ್ಪಗಳನ್ನು ರಚಿಸುವುದನ್ನು ನಾವು ಕಾಣಬಹುದು. ಅವುಗಳಲ್ಲಿ ಪ್ಲಾಸ್ಟರ್ ಆಫ್ ಪ್ಯಾರಿಸ್, ಕಾಷ್ಟ ಕಲ್ಲು, ಬಿಳಿ ಕಲ್ಲು, ಮಾಧ್ಯಮಗಳೆಂದು ವರ್ಗೀಕರಿಸಿಕೊಂಡು ಇಲ್ಲಿ ಅಧ್ಯಯನ ನಡೆಸಲಾಗಿದೆ.

**ಅಧ್ಯಾಯ ನಾಲ್ಕು**

ಕೆ. ಜ್ಞಾನೇಶ್ವರ ಅವರ ಕಲಾಕೃತಿಗಳ ಶೈಲಿ, ಪ್ರಭಾವ, ಪ್ರೇರಣೆ ಹಾಗೂ ತಂತ್ರಗಾರಿಕೆ ಈ ಅಧ್ಯಾಯದಲ್ಲಿ ಕೆ. ಜ್ಞಾನೇಶ್ವರವರು ಬದುಕಿನುದ್ದಕ್ಕೂ ರಚಿಸಿದ ಸಾವಿರಾರು ಕಲಾಕೃತಿಗಳಲ್ಲಿ ತಮ್ಮ ಸುತ್ತಲಿನ ಪರಿಸರದ ಪ್ರಭಾವ ಪಡೆಯುವುದರ ಮೂಲಕ ತಮ್ಮ ಅಭಿವ್ಯಕ್ತಿಗೆ ಒಂದು ನಿರ್ದಿಷ್ಟ ರೂಪವನ್ನು ನೀಡಿದ್ದಾರೆ. ಅಂತಹ ಪ್ರಭಾವ, ಪ್ರೇರಣೆ, ತಂತ್ರಗಾರಿಕೆಗಳ ಕುರಿತಾದ ಚರ್ಚೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ. ಕಲಾಕೃತಿ ನಿರ್ಮಾಣದ ಹಿಂದೆ ಕಲಾವಿದನ ಅನುಭವ ಪ್ರಭಾವ–ಪ್ರೇರಣೆಗಳು ಇದ್ದೇ ಇರುತ್ತವೆ. ಮುಖ್ಯವಾಗಿ ಕೆ. ಜ್ಞಾನೇಶ್ವರರಿಗೆ ಅವರ ಮುತ್ತಾತ ತಿಪ್ಪಾಜಿಯವರ ಪ್ರಭಾವವು ತುಂಬಾ ಇದೆ. ಹಲವಾರು ಶೈಲಿಯಲ್ಲಿ ಕೃತಿ ರಚಿಸಿದವರು ಕಾಲಕ್ಕೆ ಅವರ ಕಲಾಕೃತಿಗಳ ಶೈಲಿ ಬದಲಾಗುತ್ತಾ ಹೋಗಿದೆಯಾದರೂ ಇವರದೇ ಕಲಾಕೃತಿ ಎಂದು ಗುರುತಿಸುವ ಅಂಶ ಎಲ್ಲಾ ಕಲಾಕೃತಿಗಳಲ್ಲಿ ಎದ್ದು ಕಾಣುತ್ತದೆ ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಐದು**

ಕೆ. ಜ್ಞಾನೇಶ್ವರವರು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸಂಸ್ಥೆಗಾಗಿ ಕೈಗೊಂಡ ಕಾರ್ಯಗಳನ್ನು ಈ ಅಧ್ಯಾಯದಲ್ಲಿ ದಾಖಲು ಮಾಡಲಾಗಿದೆ. ಅವರ ಬದುಕಿನುದ್ದಕ್ಕೂ ವಿವಿಧ ರೀತಿಯ ವರ್ಣಚಿತ್ರಗಳು ಮತ್ತು ಶಿಲ್ಪಗಳನ್ನು ರಚಿಸಿದ್ದಾರೆ. ಅವುಗಳ ದಾಖಲು ಮಾಡಿಕೊಡಲಾಗಿದೆ. ಕೆ. ಜ್ಞಾನೇಶ್ವರವರು ಕಲಾಸಾಹಿತಿಯೆಂದು ಗುರುತಿಸದೇ ಇದ್ದರೂ ಅವರಲ್ಲಿ ಸೂಕ್ಷ್ಮಗ್ರಹಿಕೆಯಿಂದ ಕೂಡಿದ ಮೌಖಿಕ ಸಾಹಿತ್ಯ ವಿಶಾಲವಾದ ಹಠವನ್ನು ಪಡೆದುಕೊಂಡಿದೆ. ಕಲೆ ಮತ್ತು ಕಲಾವಿಮರ್ಶೆಯ ಕುರಿತು ಪ್ರಬುದ್ಧವಾಗಿ ಮಾತನಾಡುವ ಇವರ ಆಯ್ದ ಹೇಳಿಕೆಗಳನ್ನು ದಾಖಲಿಸಲಾಗಿದೆ. ಕಲಾ ವಿಮರ್ಶೆಗಳು ಹಾಗೂ ಸಂದರ್ಶನಗಳ ಅಧ್ಯಯನ ಮಾಡಲಾಗಿದೆ. ಅಲ್ಲದೆ ಅವರ ವಿವಿಧ ದೇಶಗಳಲ್ಲಿ ಮಾರಾಟವಾದ ಕಲಾಕೃತಿಗಳ ದಾಖಲೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

**ಅಧ್ಯಾಯ ಆರು**

ಈ ಅಧ್ಯಾಯವು ಸಮಾರೋಪವಾಗಿದ್ದು, ಪ್ರಸ್ತುತ ಅಧ್ಯಾಯದಲ್ಲಿ ಮಹಾಪ್ರಬಂಧದ ಎಲ್ಲಾ ಅಧ್ಯಾಯಗಳ ಸಮೀಕ್ಷೆಯನ್ನು ಮಾಡಲಾಗಿದೆ. ಅಲ್ಲದೆ ಕೆ. ಜ್ಞಾನೇಶ್ವರವರ ವ್ಯಕ್ತಿ, ವ್ಯಕ್ತಿತ್ವ ಅವರ ಕಲಾಕೃತಿಗಳ ತಂತ್ರ, ವರ್ಣ, ವೈಶಿಷ್ಟ್ಯ, ಸಮಕಾಲೀನ ಕಲಾಕ್ಷೇತ್ರಕ್ಕೆ ನೀಡಿದ ಕೊಡುಗೆ

ಹಾಗೂ ಕೆ. ಜ್ಞಾನೇಶ್ವರವರ ಕಲಾಕೃತಿಗಳ ಒಲವು ಸಾಮಾಜಿಕ, ಧಾರ್ಮಿಕ ಚಿಂತನೆಗಳ ವಿವಿಧ ಮಗ್ಗಲುಗಳ ಸಂಗತಿಯನ್ನು ಅಧ್ಯಯನದ ಸಮಾರೋಪದೊಂದಿಗೆ ಕೆಲವು ಫಲಿತಗಳ ಸಮಾಲೋಚನೆ ನಡೆಸಿ ಸಮಾರೋಪ ಮಾಡಲಾಗಿದೆ.

* * *

ಅಧ್ಯಾಯ ಎರಡು

# ಕೆ. ಜ್ಞಾನೇಶ್ವರ ಅವರ ಸಾಂಸ್ಕೃತಿಕ ಪರಿಸರ ಮತ್ತು ಕಲಾಬದುಕು

## ಕೆ. ಜ್ಞಾನೇಶ್ವರ ಅವರ ಸಾಂಸ್ಕೃತಿಕ ಪರಿಸರ ಮತ್ತು ಕಲಾಬದುಕು

ಮಲೆನಾಡಿನ ಶಿವಮೊಗ್ಗ ಜಿಲ್ಲೆಯ ಏಳು ತಾಲೂಕು ಕೇಂದ್ರಗಳನ್ನು ಒಳಗೊಂಡಿರುವ ಒಂದು ಸಮೃದ್ಧ ಜಿಲ್ಲೆಯಾಗಿದೆ. ಶಿವಮೊಗ್ಗ, ಭದ್ರಾವತಿ, ಹೊಸನಗರ, ಶಿಕಾರಿಪುರ, ತೀರ್ಥಹಳ್ಳಿ, ಸಾಗರ, ಸೊರಬ ಈ ರೀತಿಯಲ್ಲಿ ಏಳು ತಾಲೂಕುಗಳನ್ನಾಗಿ ವಿಂಗಡಿಸಿಕೊಂಡಿದ್ದಾರೆ. ಅಧ್ಯಯನದಲ್ಲಿ ಶಿಕಾರಿಪುರ ತಾಲೂಕಿನ ಇತಿಹಾಸದ ಬಗ್ಗೆ ಕರ್ನಾಟಕದ ಬಹುತೇಕ ಶಾಸನಗಳು ದೊರೆತಿವೆ. ಈ ಶಿಕಾರಿಪುರ ತಾಲೂಕಿನ ತಾಳೆಗುಂದ ಇದು ಪ್ರಮುಖ ಶಾಸನವಾಗಿದೆ. ಶಿಕಾರಿಪುರವು ಶಿವಮೊಗ್ಗ ಜಿಲ್ಲೆಯಿಂದ ಸುಮಾರು ೫೫ ಕಿ.ಮೀ. ದೂರದಲ್ಲಿದೆ. ಶಿವಮೊಗ್ಗ ಜಿಲ್ಲೆಯ ಇತಿಹಾಸದಲ್ಲೇ ಅನೇಕ ಸಾಧನೆಯ ಕೆಲಸ ಮಾಡಿರುವ ಕೀರ್ತಿ ಶಿಕಾರಿಪುರ ತಾಲೂಕಿಗೆ ಸಲ್ಲುತ್ತದೆ. ಕುಮದ್ವತಿ–ಬಲದಂಡೆಯ ಮೇಲಿರುವ ಶಿಕಾರಿಪುರ ಅತ್ಯಂತ ಪ್ರಾಚೀನ ಇತಿಹಾಸವನ್ನು ಮತ್ತು ಪೌರಾಣಿಕ, ಜಾನಪದ ಪರಂಪರೆಯನ್ನ ಉಳಿಸಿಕೊಂಡು ಬಂದಿದೆ. ಶಿಕಾರಿಪುರದ ನಾಗರಕುಂಡ–೭೦ರ ಶಾಸನ ಪೂರ್ವದಲ್ಲಿ ಶಿಕಾರಿಪುರವನ್ನು ಜೆಡಗೂರು ಎಂದು ಕರೆಯಲಾಗಿದೆ.[೧]

ಮಲೆನಾಡಿನ ಸೆರಗಿನಲ್ಲಿರುವ ಶಿಕಾರಿಪುರ ಜೈನರ, ಕಾವ್ಯದ, ಶರಣರ ವಚನದ, ಸುಕುಮಾರ ಚರಿತ್ರೆಯ ಶಾಂತಿನಾಥ ಮತ್ತು ನೃತ್ಯ ಮಯೂರಿ ಶಾಂತಲೆ ಹೀಗೆ ಈ ತಾಲೂಕಿನ ಇತಿಹಾಸದ ಪುಟ ತೆರೆದರೆ ಶಿಕಾರಿಪುರದಲ್ಲಿ ಹಿಂದೊಮ್ಮೆ ಉತ್ತರದ ನಂದರು ಆ ನಂತರ ಮೌರ್ಯರರು ಈ ಪ್ರದೇಶದ ಮೇಲೆ ಹಿಡಿತ ಸಾಧಿಸಿದ್ದರು. ಮೌರ್ಯರ ಆಡಳಿತಕ್ಕೆ ಈ ತಾಲೂಕು ಒಳಪಟ್ಟಿತ್ತು ಎಂಬುದರ ಬಗ್ಗೆ ಆಧಾರಗಳು ಬಂದಳಿಕೆ ಗ್ರಾಮದ ಶಾಸನವೊಂದರಲ್ಲಿ ಕಂಡುಬರುತ್ತದೆ.[೨] ಭಾರತದ ಸ್ವರ್ಣಯುಗ ಎಂದೇ ಮೌರ್ಯರ ಆಡಳಿತಾವಧಿಯನ್ನು ಚರಿತ್ರೆಯಲ್ಲಿ ಕರೆದಿದ್ದಾರೆ. ಅಂತಹ ಸ್ವರ್ಣಯುಗದ ಆಡಳಿತದ ಒಂದು ಭಾಗವಾಗಿಯು ಸಹ

---

೧. ಶ್ರೀಕಂಠ ಅವರ ಕೂಡಿಗೆ ಸೀಮಾಗೆ, ಪು.೨೨
೨. ಅದೇ, ಪು.೨೩

ಈ ತಾಲೂಕು ಮೆರೆದಿದೆ. ನಂತರ ಶಾತಾವಾಹನರು ಆಳಿದ ಈ ಪ್ರದೇಶಕ್ಕೆ ಶಿಕಾರಿಪುರ ತಾಲೂಕು ಸಹ ಒಳಪಟ್ಟಿದ್ದು. ಪಲ್ಲವರು ಸಹ ಈ ಪ್ರದೇಶದ ಮೇಲೆ ಹಿಡಿತ ಹೊಂದಿದ್ದರು. ಈ ತಾಲೂಕು ಕನ್ನಡ ಡಿಂಡಿಂರ ಹೆಮ್ಮೆ ಶುರುವಾಗುವುದು ಕದಂಬರ ಕಾಲದಲ್ಲಿ ಚೋಳರನ್ನು ಹತ್ತಿಕ್ಕೆಲು ಪಾಳೆಯಕಟ್ಟು ರಾಜನಾಗಿ ಮೆರೆದು ಮೌರ್ಯೂರವರ್ಮ, ಕದಂಬ ಮನೆತನದ ರಾಜ್ಯಾಡಳಿತ ಸ್ಥಾಪಿಸಿಕೊಂಡಿದ್ದು.[೩] ಕರ್ನಾಟಕ ಇತಿಹಾಸದ ಮೊದಲ ಮೈಲುಗಲ್ಲೂ, ಕದಂಬರ ಆಡಳಿತ ಈ ನೆಲದಲ್ಲೂ ನಡೆದಿದೆ. ಕದಂಬರ ನಂತರ ಚಾಲುಕ್ಯರು ಸುಮಾರು ೨೦೦ ವರ್ಷ ಈ ನಾಡನ್ನು ಆಳಿದ್ದಾರೆ.

ಶಿವಮೊಗ್ಗ ಜಿಲ್ಲೆಯಲ್ಲಿ ದೊರೆತಿರುವ ಸುಮಾರು ೨೦೦ಕ್ಕೂ ಹೆಚ್ಚು ಶಾಸನಗಳಲ್ಲಿ. ಅರ್ಧದಷ್ಟು ಶಿಕಾರಿಪುರ ತಾಲೂಕಿನಲ್ಲಿ ದೊರೆತಿವೆ. ಈ ತಾಲೂಕಿನ ಬಿಸಲೆಹಳ್ಳಿಯನ್ನು ಮಹಾಭಾರತದ ಕಥೆಯಲ್ಲಿ ಏಕಚಕ್ರನಗರ ಎಂದು ಗುರುತಿಸಲಾಗಿದೆ. ಬಕಸುರನನ್ನು ಕೊಂದು ವಿರಾಟಪರರಿಗೆ ಹೋಗುವ ಮಾರ್ಗದಲ್ಲಿ ಬಳ್ಳಿಗಾವೆಯಲ್ಲಿರುವ ಸಹಸ್ರ ಲಿಂಗೇಶ್ವರ ದೇಗುಲ ಪ್ರತಿಸ್ಥಾಪಿಸಿದರು ಎಂಬುದು ತಿಳಿಯುತ್ತದೆ. ಕದಂಬ ಕುಲದ ಸಾಹಸ ಕಥೆಯ ಚರಿತ್ರೆಯನ್ನು ಕಲ್ಲಿನಲ್ಲಿ ಕೆತ್ತಿಸಿ ಇಂದಿಗೂ ತಾಳೆಗುಂದದ ಪ್ರಣವ ಸರೋವರ ದಂಡೆಯ ಮೇಲಿರುವ ಮುರುಕು ಪ್ರಣವೇಶ್ವರ ದೇವಸ್ಥಾನದ ಮುಂದಿನ ಬಲಭಾಗದ ಸ್ತಂಭಶಿಲಾ ಶಾಸನದಲ್ಲಿ ನಾವು ಕಾಣಬಹುದು.

ಶಾಸನಶಾಸ್ತ್ರ ಇತಿಹಾಸದಲ್ಲಿ ಅಪರೂಪದ ಎರಡು ಸ್ತಂಭ ಶಿಲಾಶಾಸನ ಇರುವುದು ಈ ತಾಲೂಕಿನ ತಾಳಗುಂದ ಮತ್ತು ಮಳವಳ್ಳಿಗಳಲ್ಲಿ ಅಂತೆಯೇ ರಾಮೇಶ್ವರ ದೇವಸ್ಥಾನದ ಎದುರು ಚಾಲುಕ್ಯ ವಂಶಕ್ಕೆ ಸಂಬಂಧಿಸಿದಂತೆ ಇನ್ನೂ ಹಲವೂ ಶಾಸನಗಳು ಇವೆ. ಸರ್ವಧರ್ಮದ ಸಮನ್ವಯದ ಬೀಡಾದ ಶಿಕಾರಿಪುರ ತಾಲೂಕಿನ ಹಿರಿಮೆ ಮತ್ತು ಬೌದ್ಧರು, ಜೈನರು, ಶೈವರು, ವೈಷ್ಣವರು ಸೇರಿ ಬೆಳೆಸಿದ ಬಳ್ಳಿಗಾವೆ ಇಂದಿಗೂ ನಮ್ಮ ಕಣ್ಮುಂದೆ ಇದೆ.

ಅದೇ ರೀತಿಯಾಗಿ ಶಿಕಾರಿಪುರ ತಾಲ್ಲೂಕಿನಲ್ಲಿರುವ ಶಿಲ್ಪ ಸೌಂದರ್ಯವನ್ನು ಹೊತ್ತು ನಿಂತ ದೇವಾಲಯಗಳು ಹೀಗಿವೆ.

* ಬಳ್ಳಿಗಾವೆಯ ದೇವಾಲಯ. ಇದು ಹೊಯ್ಸಳ ಶೈಲಿಯಲ್ಲಿದೆ. ಕೆದಾರೇಶ್ವರ ದೇವಾಲಯ ಇದಾಗಿದೆ.
* ಬಳ್ಳಿಗಾವೆಯ ತ್ರಿಪುರಾಂತಕೇಶ್ವರ ದೇವಾಲಯಗಳು
* ಬಂದಳಿಕೆಯ ತ್ರಿಮೂರ್ತಿ ದೇವಾಲಯ ಇದು ತ್ರೈಪುರುಷ ದೇವಾಲಯವಾಗಿದೆ.
* ಬಂದಳಿಕೆಯ ಸೋಮೇಶ್ವರ ದೇವಾಲಯ
* ಪ್ರಣವೇಶ್ವರ ದೇವಾಲಯ, ತಾಳೆಗೊಂದ.

೩. ಶ್ರೀಕಂಠ ಅವರ ಕೂಡಿಗೆ ಸೀಮಾಗೆ, ಪು.೨೫

ಈ ರೀತಿಯ ವಾಸ್ತು ದೇವಾಲಯ ಮತ್ತು ಕಲಾಶೈಲಿಯ ಶಿಲ್ಪಗಳು ಇರುವ ಒಂದು ಪರಿಸರದಲ್ಲಿ ಕಲಾವಿದ ಕೆ. ಜ್ಞಾನೇಶ್ವರವರಿಗೆ ಕಲೆಯಲ್ಲಿ ಹೆಚ್ಚು ಪ್ರಭಾವ ಪ್ರೇರಣೆಯನ್ನು ನೀಡಿದೆ ಎಂದು ಜ್ಞಾನೇಶ್ವರವರು ಹೇಳಿಕೊಳ್ಳುತ್ತಾರೆ.

ಶಿಕಾರಿಪುರದ ಬಗ್ಗೆ ದೊಡ್ಡ ಇತಿಹಾಸವೇ ಇದೆ. ಈ ತಾಲ್ಲೂಕಿನ ಬಗ್ಗೆ ಎಷ್ಟು ಹೇಳಿದರೂ ಸಾಲದು ಇಂತಹ ಊರಿನಲ್ಲಿಯೇ ಕೆ. ಜ್ಞಾನೇಶ್ವರವರು ಜನಿಸಿದ್ದು ದಿನಾಂಕ ೨೧.೮.೧೯೪೪ರಂದು ತಂದೆ ಕೃಷ್ಣೋಜಿರಾವ್ ಕೌಟಿಕರವರು ತಾಯಿ ಪಾರ್ವತಿಬಾಯಿ ಇವರಿಗೆ ಆರು ಜನ ಮಕ್ಕಳು ಅದರಲ್ಲಿ ಮೊದಲನೇ ಮಗ ಕೆ.ಕಾಶಿನಾಥ, ಎರಡನೆಯವರು ಕೆ. ಜ್ಞಾನೇಶ್ವರ, ಮೂರನೆಯವರು ಮಕ್ತಬಾಯಿ, ನಾಲ್ಕನೆಯವರು ಕೆ. ನಾರಾಯಣ, ಐದನೆಯವರು ಕೆ. ಚಂದ್ರಕಾಂತ, ಆರನೆಯವರು ರೇಣುಕಾಬಾಯಿ. ಈ ಎಲ್ಲರು ತಂದೆ ತಾಯಿಗೆ ಅಚ್ಚುಮೆಚ್ಚಿನ ಮಕ್ಕಳಾಗಿದ್ದರು ಮತ್ತು ಇವರ ಮುತ್ತಾತ ತಿಪ್ಪಾಜಿಯವರು. ತಾತಾ ಪರಶುರಾಮಪ್ಪ ಇವರ ಮೊಮ್ಮಕ್ಕಳು ಆಗಿದ್ದರು.

ಕೆ. ಜ್ಞಾನೇಶ್ವರ ಅವರು ಮಲೆನಾಡಿನ ಶಿಲ್ಪ, ಚಿತ್ರಕಲಾವಿದರಾಗಿ ನಮಗೆಲ್ಲಾ ಪರಿಚಯವಾಗಲು ಕಾರಣಕರ್ತರೆ ತಿಪ್ಪಾಜಿಯವರು. ಇಂತಹ ಮಹಾನ ಕಲಾವಿದ ಜನಿಸಿದ್ದು ಈ ಮಲೆನಾಡಿನ ಮಡಿಲಿನಲ್ಲಿಯೇ. ತಿಪ್ಪಾಜಿಯವರು ಹುಟ್ಟಿದ್ದು ನಿಖರವಾದ ದಿನಾಂಕ ತಿಳಿಯದು ಇವರು ೧೮೩೦ರ ದಶಕದಲ್ಲಿ ಹುಟ್ಟಿರಬಹುದು ಎಂದು ಹೇಳಲಾಗಿದೆ. ಇವರ ತಂದೆ ಖಂಡಪ್ಪನವರು. ತಿಪ್ಪಾಜಿಯವರಿಗೆ ತಮ್ಮ ತಂದೆ ಖಂಡಪ್ಪನವರ ಗುರುವಾಗಿದ್ದರು ಬಾಲ್ಯಾದಿಂದಲೆ ಕಲಾ ಶಿಕ್ಷಣವನ್ನು ಪಡೆಯುತ್ತ ಬೆಳೆದ ತಿಪ್ಪಾಜಿಯವರು ಸ್ವಲ್ಪಸ್ವಲ್ಪವಾಗಿ ಕಲೆಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುತ್ತ ಬರುತ್ತಿದ್ದರು.[೪] (ಕಲಾವಿದರ ಸಂದರ್ಶನದಿಂದ ತಿಳಿದ ಮಾಹಿತಿ)

ತಂದೆ ಖಂಡಪ್ಪನವರು ಕಾಷ್ಟ ಶಿಲ್ಪಗಳನ್ನು ರಚಿಸುತ್ತಿದ್ದರು ಮತ್ತು ಮರದ ಶಿಲ್ಪಿ, ಕಂಚು, ಹಿತ್ತಾಳೆಯ ಮೂರ್ತಿಗಳನ್ನು ತಯಾರಿಸುತ್ತಿದ್ದರು. ಅಂತಹ ಒಳ್ಳೆಯ ಕಲಾವಿದರಾಗಿದ್ದ ಖಂಡಪ್ಪನವರು ತಮ್ಮ ಮಗನಾದ ತಿಪ್ಪಾಜಿಯವರಿಗೆ ಕಲೆಯನ್ನು ಅಭ್ಯಾಸಿಸುತ್ತಾ ಬಂದರು. ಮೊದಲಿಗೆ ರೇಖಾಚಿತ್ರಗಳನ್ನು ರಚಿಸಲು ಹೇಳಿದರು. ಆಗಾ ತಿಪ್ಪಾಜಿಯವರು ತಮಗೆ ಬರುವ ಚಿತ್ರಗಳನೆಲ್ಲಾ ಚಿತ್ರಿಸಿ ತಂದೆಯವರಿಗೆ ತೋರಿಸುತ್ತಿದ್ದರು. ಆದರೆ ತಂದೆ ಖಂಡಪ್ಪನವರು ಕಲೆಯ ವಿಷಯದಲ್ಲಿ ತುಂಬಾನೆ ಕಟ್ಟುನಿಟ್ಟಿನಿಂದ ಮಗನಿಗೆ ಬೇಲೂರು, ಹಳೇಬೀಡಿಗೆ ಕರೆದುಕೊಂಡು ಹೋಗಿ ಅಲ್ಲಿಯ ಸ್ಥಳ ಮತ್ತು ದೇವಾಲಯದಲ್ಲಿಯ ಮೂರ್ತಿಶಿಲ್ಪಗಳನ್ನು ಸ್ತಂಭಗಳಲ್ಲಿರುವ ಚಿತ್ತಾರ, ಬಳ್ಳಿ, ಹೂಗಳ ವಿನ್ಯಾಸಗಳನ್ನು ತಿಪ್ಪಾಜಿಯವರು ಗಮನಿಸಲು ಹೇಳಿದರು. ನಂತರ ಅಲ್ಲಿಯೆ ಇದ್ದು ಆ ಶಿಲ್ಪಗಳ ವಿನ್ಯಾಸ ಯಾವ ರೀತಿಯಾಗಿ ಕೆತ್ತಿದ್ದಾರೆ ಎಂಬುದನ್ನು ನೋಡಿ ರೇಖಾಚಿತ್ರಗಳನ್ನು ಚಿತ್ರಿಸಿಕೊಂಡು ಬರಲು ತಂದೆ ಖಂಡಪ್ಪನವರು ತಿಪ್ಪಾಜಿಯವರಿಗೆ ತಿಳಿಸಿದರು.

೪. ಕಲಾವಿದ ಜ್ಞಾನೇಶ್ವರವರ ಸಂದರ್ಶನದಿಂದ ತಿಳಿದ ಮಾಹಿತಿ

ನಂತರ ತಿಪ್ಪಾಜಿಯವರು ಬೇಲೂರು ಹಳೇಬೀಡಿನ ದೇವಾಲಯದ ಸೌಂದರ್ಯವನ್ನು ಸವಿಯುತ್ತ ಅಲ್ಲಿಯ ಶಿಲ್ಪಗಳನ್ನು ಮತ್ತು ಸ್ತಂಭಗಳಲ್ಲಿ ಇರುವ ಹೂ ಬಳ್ಳಿ ದರ್ಪಣ ಸುಂದರಿ ನಾಟ್ಯವಾಡುವ ನೃತ್ಯಗಾರ್ತಿಯರು ಸಾಲು ಮತ್ತು ವಿಶೇಷ ರೀತಿಯ ಶಿಲ್ಪಗಳನ್ನು ಗಮನಿಸಿ ರೇಖಾಚಿತ್ರಗಳನ್ನು ಚಿತ್ರಿಸುತ್ತಾ ಅಭ್ಯಾಸಿಸುತ್ತಿದ್ದರು. ತಂದೆಯ ಮಾರ್ಗದರ್ಶನದಲ್ಲಿ ಕಲಾಶಿಕ್ಷಣವನ್ನು ಮುಂದುವರೆಸಿಕೊಂಡು ಹೋದರು. ತಿಪ್ಪಾಜಿಯವರು ತಮ್ಮ ಜೀವನದಲ್ಲಿ ತುಂಬಾ ಕಷ್ಟ-ನಷ್ಟಗಳನ್ನು ಅನುಭವಿಸುತ್ತ ಬಂದಿದ್ದಾರೆ. ಹಾಗೂ ಅವರ ಮನೆಯಲ್ಲಿ ಕಿತ್ತು ತಿನ್ನುವ ಬಡತನ ತುಂಬು ಸಂಸಾರ ಜೀವನವನ್ನು ನಡೆಸುತ್ತಾ ಮಧ್ಯೆ ಕಲಾರಾಧನೆಯನ್ನು ಮುಂದುವರೆಸಿ ಏನಾದರು ಸಾಧಿಸಲೇಬೇಕು ಎಂಬ ಹಠ ತಿಪ್ಪಾಜಿಯವರದು. ಅಷ್ಟೇಲ್ಲ ಕಷ್ಟವಿದ್ದರೂ ಕಲೆಯನ್ನು ಮಾತ್ರ ಬಿಡದೆ ಮುಂದುವರೆಸಿಕೊಂಡು ಬಂದರು. ಅದೇ ರೀತಿಯಾಗಿ ಕಲೆಯು ಸಹ ಅವರನ್ನು ಕಾಪಾಡಿಕೊಂಡು ಬಂದಿದೆ ಎನ್ನುವುದು ತಿಪ್ಪಾಜಿಯವರ ಭಾವನೆ.

ತಂದೆ ಖಂಡಪ್ಪನವರು ತೀರಿಕೊಂಡ ಮೇಲೆ ಅವರು ಕಲಿಸಿದ್ದ ಕಲೆಯ ನೆರಳಿನಲ್ಲಿಯೇ ತಿಪ್ಪಾಜಿಯವರು ನಡೆಯುತ್ತ ಬಂದರು. ಕಲೆಯೇ ಅವರ ಗುರಿಯಾಗಿತ್ತು. ಅನೇಕ ಶ್ರೀಮಂತ ಮನೆಯವರ ಭಾವ ಚಿತ್ರಗಳನ್ನು ಮಾಡುತ್ತ ತಿಪ್ಪಾಜಿಯವರು ಜನರ ಮಧ್ಯ ಕಾಣಿಸಿಕೊಳ್ಳುತ್ತಿದ್ದರು. ಅವರ ತಂದೆಯು ರಚಿಸುತ್ತಿದ್ದ ಮೂರ್ತಿಶಿಲ್ಪಗಳನ್ನು ತಿಪ್ಪಾಜಿಯವರು ಸಹ ಮುಂದುವರೆಸಿಕೊಂಡು ಬಂದರು. ಒಂದು ನಾಣ್ಯದ ಎರಡು ಮುಖಗಳಂತೆ ಚಿತ್ರ ಮತ್ತು ಶಿಲ್ಪ ರಚನೆ ಎರಡನ್ನು ರಚಿಸುವುದನ್ನು ಮುಂದುವರೆಸಿದರು. ಮಲೆನಾಡು ಕಲಾಪ್ರತಿಭೆಗೆ ತಕ್ಕ ಸ್ಥಳವಲ್ಲ ಎಂದು ತಿಪ್ಪಾಜಿಯವರಿಗೆ ಅನಿಸಿದಾಗ ಅವರು ಮೈಸೂರಿಗೆ ತೆರಳುತ್ತಾರೆ. ಅಲ್ಲಿ ಅರಮನೆ ಆಸ್ಥಾನ ಕಲಾವಿದರಾಗಿ ಬೆಳೆಯುತ್ತಾ ಹೋಗುತ್ತಾರೆ. ಅನೇಕ ಕಲಾಕೃತಿಗಳನ್ನು ರಚಿಸಿದರು. ಅವರ ಒಂದು ಕಲಾಕೃತಿಗೆ ಅಂದಿನ ಕಾಲದಲ್ಲೇ ಸರ್ಕಾರದಿಂದ ರಾಷ್ಟ್ರಮಟ್ಟದಲ್ಲಿ ಬಂಗಾರದ ಪದಕವನ್ನು ನೀಡಿ ತಿಪ್ಪಾಜಿಯವರನ್ನು ಗೌರವಿಸಿದ್ದರು. ಮತ್ತು 'ಮಾಡೆಲ ಆರ್ಟಿಸ್ಟ' ಎಂಬ ಬಿರುದನ್ನು ನೀಡಿದರು. ಅಂದಿನಿಂದ ಮೈಸೂರಿನಲ್ಲಿ ತಿಪ್ಪಾಜಿಯವರನ್ನು ಮಾಡೆಲ್ ಆರ್ಟಿಸ್ಟ್ ಎಂದು ಕರೆಯಲು ಪ್ರಾರಂಭಿಸಿದರು.[೫] ಇಂದಿಗೂ ತಿಪ್ಪಾಜಿಯವರು ರಚಿಸಿದ ಏಷ್ಟೋ ಕಲಾಕೃತಿಗಳು ಶ್ರೀಮಂತರ ಮನೆಗಳಲ್ಲಿ ಇರುವುದನ್ನು ನಾವು ಕಾಣಬಹುದು. ಮತ್ತು ಈಗಲು ಮೈಸೂರಿನ ಜಗನ್ಮೋಹನ ಅರಮನೆಯಲ್ಲಿರುವ 'ಕೃಷ್ಣಾರ್ಜುನ ಕಾಳಗ' ಕಲಾಕೃತಿಯು ಇಗಲು ನಾವು ನೋಡಬಹುದು. ಸಾಂಪ್ರದಾಯಿಕ ಶೈಲಿಯಲ್ಲಿ ಈ ಕಲಾಕೃತಿಗಳನ್ನು ರಚಿಸಲಾಗಿದೆ. ಅದೇ ರೀತಿಯಾಗಿ ಇವರ ಇನ್ನೂ ಹಲವು ಕಲಾಕೃತಿಗಳು ಲಂಡನ್‌ಲ್ಲಿರುವ ಒಂದು ವಸ್ತು ಸಂಗ್ರಹಾಲಯದಲ್ಲಿವೆ ಎಂದು ಹೇಳಿದ್ದಾರೆ. ಅದು ಮುಮ್ಮುಡಿ ಕೃಷ್ಣರಾಜ ಒಡೆಯರಿಂದ ರಚಿತವಾದ 'ಶ್ರೀತತ್ವ ನಿಧಿ' ಎಂಬ ಗ್ರಂಥಕ್ಕೆ ತಿಪ್ಪಾಜಿಯವರು ರಚಿಸಿದ ಕೆಲವು ಚಿತ್ರಗಳನ್ನು ಆ ಗ್ರಂಥದಲ್ಲಿ ನಾವು ಗಮನಿಸಬಹುದು. (ಕಲಾವಿದರ ಸಂದರ್ಶನದಿಂದ ತಿಳಿದ ಮಾಹಿತಿ.)

೫. ಕಲಾವಿದ ಜ್ಞಾನೇಶ್ವರವರ ಸಂದರ್ಶನದಿಂದ ತಿಳಿದ ಮಾಹಿತಿ

ತಿಪ್ಪಾಜಿಯವರು ಉನ್ನತಮಟ್ಟದ ಚಿತ್ರಕಲಾವಿದರಾಗಿದ್ದರು. ಪ್ರತಿಯೊಬ್ಬ ಶಿಲ್ಪಿಯೂ ಚಿತ್ರಕಲೆಯನ್ನು ಕರಗತ ಮಾಡಿಕೊಂಡು ರೂಢಿಸಿಕೊಳ್ಳಲೇಬೇಕು. ಆದರೆ ಚಿತ್ರಕಲೆಯಲ್ಲಿ ಸಾಧನೆ–ಸಾಧ್ಯತೆಯನ್ನು ಸಾಧಿಸಿ ತೋರಿಸಿದವರು ತುಂಬಾ ವಿರಳ. ಆ ಸಾಲಿನಲ್ಲಿ ತಿಪ್ಪಾಜಿಯವರ ಚಿತ್ರಗಳು ತುಂಬಾ ಸೂಕ್ಷ್ಮರೇಖಾ ವಿನ್ಯಾಸಗಳಿಂದ ಕೂಡಿದ್ದು, ಆಕೃತಿಗಳಲ್ಲಿಯ ಹಾವಭಾವ ಬಹಳ ಸುಂದರವಾಗಿದ್ದು, ಅದಕ್ಕೆ ಉಪಯೋಗಿಸಿದ ಬಣ್ಣವು ಸೂಕ್ಷ್ಮವಾಗಿ ಹಚ್ಚಿದ್ದಾರೆ. ಮತ್ತು ರೇಖಾ ವಿನ್ಯಾಸಗಳಿಂದ ವಿಶೇಷ ರೀತಿಯಲ್ಲಿ ಕಾಣುವ ಹಾಗೇ ಚಿತ್ರಿಸಿದ್ದು ಎಂಥವರ ಮನಸ್ಸನ್ನು ಸೂರೆಗೊಳಿಸುವ ಶಕ್ತಿ ತಿಪ್ಪಾಜಿಯವರ ಕಲಾಕೃತಿಗೆ ಇದೆ ಎನ್ನಬಹುದು.[೬] ತಿಪ್ಪಾಜಿಯವರು ರಚಿಸಿದ ಕಲಾಕೃತಿಗಳಲ್ಲಿ ಈ ಕೆಳಗಿನವುಗಳೆಂದು ಹೇಳಲಾಗಿದೆ. ವಿಶ್ವರೂಪ ದರ್ಶನ ಇದು ಇವರ ಶ್ರೇಷ್ಠ ಕಲಾಕೃತಿಯಲ್ಲಿ ಒಂದು. ಇದು ೧೨ ಮತ್ತು ೧೬ ಅಳತೆಯ ಕಾಗದದಲ್ಲಿ ರಚಿಸಲ್ಪಟ್ಟಿದೆ. ಭಗವಾನ್ ಶ್ರೀ ಕೃಷ್ಣನು ಅರ್ಜುನನಿಗೆ ತೋರಿದ ವಿಶ್ವರೂಪ ದರ್ಶನದ ದೃಶ್ಯವಿದು. ಎಲ್ಲಾ ದೇವಾನುದೇವತೆಗಳನ್ನು ಒಳಗೊಂಡಿದೆ. ಇನ್ನು ಲಕ್ಷ್ಮೀ, ಸರಸ್ವತಿ, ಗಣಪತಿ, ದರ್ಪಣ ಸುಂದರಿ, ಹೊಲದಲ್ಲಿ ಕೆಲಸ ಮಾಡುತ್ತಿರುವ ಮಹಿಳೆಯರು ಹೀಗೆ ಮೊದಲಾದ ಕಲಾಕೃತಿಗಳನ್ನು ತಿಪ್ಪಾಜಿಯವರು ರಚಿಸಿದ್ದಾರೆ. ತಿಪ್ಪಾಜಿಯವರ ಕಲಾಕೃತಿಗಳನ್ನು ಮೊದಲ ಬಾರಿಗೆ ಕರ್ನಾಟಕದಲ್ಲಿ ಪರಿಚಯಿಸಿದವರು ಎಂದರೆ ದಿ. ಎಸ್.ಎಸ್. ಕುಕ್ಕೆಯವರು ಇವರು ಶಿವಮೊಗ್ಗದ ಸಂಗ್ರಹಕಾರರ ಮನೆಯಲ್ಲಿದ್ದ ಕಲಾಕೃತಿಗಳನ್ನು ಆ ಮನೆಯವರ ಮನವೊಲಿಸಿ ಕಷ್ಟಪಟ್ಟು ಬೆಂಗಳೂರಿಗೆ ಆ ಕಲಾಕೃತಿಗಳನ್ನು ತಂದು ಪ್ರದರ್ಶನವೊಂದರಲ್ಲಿ ಪ್ರದರ್ಶಿಸಿದರು. ನಂತರ ಸ್ವಲ್ಪ ದಿನಗಳು ಕಳೆದ ಕರ್ನಾಟಕ ಸರ್ಕಾರದವರು ಆ ಕಲಾಕೃತಿಗಳನ್ನು ದೆಹಲಿಯಲ್ಲಿ ಪ್ರದರ್ಶಿಸಲು ಅವಕಾಶ ಮಾಡಿಕೊಟ್ಟರು. ಈ ರೀತಿಯಲ್ಲಿ ಪ್ರದರ್ಶನಗೊಂಡ ತಿಪ್ಪಾಜಿಯವರ ಕಲಾಕೃತಿಗಳು ಕಲಾ ಪ್ರೇಮಿಗಳಿಗೆ ಸ್ಪೂರ್ತಿಯನ್ನು ನೀಡಿವೆ ಮತ್ತು ತಿಪ್ಪಾಜಿಯವರ ಕಲಾಕೃತಿಗಳು ಸಂಪ್ರದಾಯಿಕ ಶೈಲಿಯಲ್ಲಿವೆ. ಈ ಪ್ರಚಾರ ಗೌರವ ತಿಪ್ಪಾಜಿಯವರು ಬದುಕಿದ್ದಾಗ ಸಿಕ್ಕಿದ್ದರೆ ತುಂಬಾ ಸಂತೋಷಪಡುತ್ತದ್ದರು. ಆದರೆ ಅವರು ತೀರಿಕೊಂಡ ನಂತರ ಅವರ ಕಲಾ ಕೃತಿಗಳು ಬೇರೆಯವರಿಗೆ ಸ್ಪೂರ್ತಿ, ಪ್ರೋತ್ಸಾಹವನ್ನು ನೀಡುವಷ್ಟು ಗೌರವ ಪಾತ್ರಕ್ಕೆ ಸೇರುತ್ತವೆ ಎಂದರೆ ಕಲಾವಿದರಿಗೆ ಎಷ್ಟು ತೃಪ್ತಿ ಸಿಗುತ್ತದೆ ಎಂಬುದು ಅವರಿಗೆ ಗೊತ್ತು.[೭] ಇಂತಹ ಒಬ್ಬ ಮಹಾನ್ ಕಲಾವಿದರ ಮೊಮ್ಮಗನಾಗಿ ಹುಟ್ಟಿರುವ ಕೆ. ಜ್ಞಾನೇಶ್ವರವರ ಆ ಮುತ್ತಾತನ ಜೊತೆಗೆ ಕಳೆದ ಬಾಲ್ಯ ಜೀವನದ ಆ ದಿನಗಳ ಬಗ್ಗೆ ತಿಳಿಯೋಣ.

## ಕಲಾವಿದರ ಬಾಲ್ಯದ ದಿನಗಳು

ಸಂಸ್ಕೃತಿ ಎಂಬ ಶಬ್ಧ ಈಚೆಗೆ ಬಹು ಮುಖವಾದ ಅರ್ಥವನ್ನು ಪಡೆದು ಬೆಳೆಯುತ್ತಾ ಬಂದಿದೆ. ಮಾನವ ಸಮುದಾಯದ ಸಂಪ್ರದಾಯಗಳಿಂದ ಹಿಡಿದು ವೈಯಕ್ತಿಕವಾದ ಆಚರಣೆಗಳ

೬. ಕಲಾವಿದ ಜ್ಞಾನೇಶ್ವರವರ ಸಂದರ್ಶನದಿಂದ ತಿಳಿದ ಮಾಹಿತಿ
೭. ಶಿವರಾಮ ಕಾರಂತ, ಕಲಾಪ್ರಪಂಚ, ಪು.೨. ೨.೧.೧೯೨೮

ವರೆಗೂ ಅದರ ವ್ಯಾಪ್ತಿ ಹಬ್ಬಿದೆ. ಮಾನವ ಜನಾಂಗಗಳ ಇತಿಹಾಸವನ್ನು ಚಿತ್ರಿಸುವಾಗ ಬಳಸುವ ಇನ್ನೊಂದು ನಾಗರಿಕತೆ ಎಂಬುದು. ಆಂಗ್ಲ ಭಾಷೆಯಲ್ಲಿ ಅದನ್ನು Caltare ಮತ್ತು Civilization ಎಂದು ಕರೆಯಲಾಗಿದೆ. ಇವೆರಡು ಪದಗಳನ್ನು ಅನೇಕ ವೇಳೆ ವಿದ್ವಾಂಸರು ಸಮಾನಾರ್ಥಕಗಳೆಂಬಂತೆ ಪ್ರಯೋಗಿಸಿರುವುದು ಉಂಟು. ಮಾನವಶಾಸ್ತ್ರಜ್ಞರು (Anthroprlogist) ಸಂಸ್ಕೃತಿ ಎಂಬುದನ್ನು ನಾಗರಿಕತೆ ಎಂಬ ಅರ್ಥದಲ್ಲಿಯೇ ಬಳಸುತ್ತಾರೆ.[೮]

ಈ ಕುರಿತು ಹಲವಾರು ಜನ ವಿದ್ವಾಂಸರಿಂದ ಚರ್ಚೆ. ಈ ಶತಮಾನದುದ್ದಕ್ಕೂ ನಡೆಯುತ್ತಿರುವುದನ್ನು ಕಾಣುತ್ತೇವೆ. ಕೆಲವರು ಅದನ್ನು ನೈತಿಕ ಹಾಗೂ ಆಧ್ಯಾತ್ಮಿಕ ಮೌಲ್ಯಗಳೊಂದಿಗೆ ಗುರುತಿಸುತ್ತಿರುವುದನ್ನು ಕಾಣುತ್ತೇವೆ. ಕೆಲವು ಲಲಿತಕಲೆಗಳೊಂದಿಗೆ ನಡವಳಿಕೆ ಹಾಗೂ ಚಿಂತನಾಕ್ರಮಗಳೊಂದಿಗೆ ಗುರುತಿಸಿದರೆ ಸಂಸ್ಕೃತಿಯಲ್ಲಿಯೂ ಔದಾರ್ಯತೆ ಅದಷ್ಟೇ ಅಲ್ಲ ಅದಕ್ಕಿಂತಲೂ ಹೆಚ್ಚಿನದು. ಬ್ರಿಟಿಷ್ ಮಾನವಶಾಸ್ತ್ರಜ್ಞ ಎಡ್ವರ್ಡ್ ಬರ್ನಿಗ್ ಸಂಸ್ಕೃತಿಯನ್ನು ಸಂಕ್ಷಿಪ್ತವಾಗಿ ಹೀಗೆ ವ್ಯಾಖ್ಯಾನಿಸುತ್ತಾರೆ. ಸಮಾಜದ ಸದಸ್ಯನಾಗಿ ಮಾನವ ಗಳಿಸಿಕೊಂಡ ಜ್ಞಾನ, ನಂಬಿಕೆ, ಕಲೆ, ನೈತಿಕತೆಗಳು, ಕಟ್ಟಳೆಗಳು ಸಂಪ್ರದಾಯ ಮತ್ತಿತರ ಸಾಮರ್ಥ್ಯಗಳು ಮತ್ತು ಸ್ವಭಾವಗಳನ್ನು ಸಂಸ್ಕೃತಿ[೯] ಎಂದು ಕರೆದಿರುವುದು ಇಲ್ಲಿ ಹೆಚ್ಚು ಮಹತ್ವದ್ದೆಂದು ಗುರುತಿಸಬಹುದಾಗಿದೆ.

ಸಂಸ್ಕೃತಿ ಎಂಬ ಪದ ಪ್ರತಿಯೊಬ್ಬ ವ್ಯಕ್ತಿಗೂ ಅನ್ವಯಿಸುತ್ತದೆ. ಆದರೆ ವಿಭಿನ್ನ ತಳಹದಿಯಲ್ಲಿ ಅದು ರೂಪಗೊಂಡಿರುವ. ಅವನ ರಚನೆ, ಹಾವ-ಭಾವ, ಸೃಜನಶೀಲ ಅಭಿವ್ಯಕ್ತಿಯಲ್ಲಿ ಅವು ಸಾಂಸ್ಕೃತಿಕ ಲೋಕದಲ್ಲಿ ಬೆಳಕಿಗೆ ಬರುವುದು ಪ್ರಕೃತಿ ಸಹಜ ಕ್ರಿಯೆಯಾಗುತ್ತದೆ. ಉದಾಹರಣೆ ಹೆಸರಾಂತ ಕಲಾವಿದರಾಗಿದ್ದ ಶ್ರೀ ಕೆ.ಕೆ.ಹೆಬ್ಬಾರರ ರೇಖಾಚಿತ್ರಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಜಾನಪದ ಸಂಸ್ಕೃತಿಗಳು ಅಲ್ಲಿನ ಬದುಕಿನ ಸಂಸ್ಕೃತಿ ಇದಕ್ಕಿಂತ ಹೆಚ್ಚಾಗಿ ಜಾನಪದ ಕಲೆ, ಯಕ್ಷಗಾನದ ಪ್ರಭಾವವು ಹೇರಳವಾಗಿ ಕಂಡುಬರುತ್ತದೆ. ಅವರ ಪ್ರತಿಯೊಂದು ಕೃತಿಯೂ ಅವರ ಹುಟ್ಟೂರಿನ ಸುತ್ತಲಿನ ಪರಿಸರದ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಕವಿಯಂತೆ ಕಥೆಗಾರರಂತೆ, ಕಲಾವಿದರೂ ಕೂಡ ತಮ್ಮ ಸುತ್ತಲಿನ ಅಥವಾ ತಾವು ಬೆಳೆದು ಬಂದ ಪರಿಸರದಲ್ಲಿನ ಅನುಭವಗಳನ್ನೇ ಕಲಾಕೃತಿಯ ಮೂಲಕ ಅಭಿವ್ಯಕ್ತಿಸುವುದು ಕಂಡುಬರುತ್ತದೆ.

ಕೃಷ್ಣಾರಾವ್ ಅವರ ಪತ್ನಿ ಪಾರ್ವತಿಬಾಯಿಯವರಿಗೆ ಆರು ಜನ ಮಕ್ಕಳು ಅವರಲ್ಲಿ ಮೊದಲು ಕಾಶಿನಾಥ, ಕೆ.ಜ್ಞಾನೇಶ್ವರ, ಕೆ. ನಾರಾಯಣ ಮತ್ತು ರೇಣುಕಾಬಾಯಿ ಈ ಮೂವರು ಚಿತ್ರಕಲೆಯನ್ನು ಕಲಿಯಲು ಇಚ್ಛಿಸುತ್ತಿದ್ದರು. ಮತ್ತಿಬ್ಬರು ಅಂದರೆ ಮುಕ್ತಾಬಾಯಿ, ಕೆ.ಚಂದ್ರಕಾಂತರವರು ಡಾಕ್ಟರ್ ಆಗಬೇಕು ಎಂದು ಆಸೆಯನ್ನು ಹೊಂದಿದ್ದರು. ಮತ್ತು ಕೆ.ಕಾಶಿನಾಥ, ಕೆ.ನಾರಾಯಣ ಇವರು ಚಿತ್ರಕಲೆಯಲ್ಲಿ ಪರಿಣಿತಿ ಹೊಂದಿದರು. ಇವರು ಜ್ಞಾನೇಶ್ವರವರು ಬಾಲ್ಯದಿಂದಲೆ ಜೊತೆಯಾಗಿ ಚಿತ್ರಕಲೆಯನ್ನು ಕಲಿತರು ಎಲ್ಲಾ ರೀತಿಯಲ್ಲಿಯೂ ಜ್ಞಾನೇಶ್ವರವರಿಗೆ ಅಣ್ಣ

೮. ಜಿ.ಸು.ಕೃಷ್ಣಶೆಟ್ಟಿ, ಚಿತ್ರಚಿತ್ತ, ಪು.೬೭, ೨೦೦೦
೯. ಕಲಾವಿದ ಜ್ಞಾನೇಶ್ವರವರೊಂದಿಗೆ ಸಂದರ್ಶನ

ಕಾಶಿನಾಥ ಮತ್ತು ತಮ್ಮನಾದ ಕೆ. ನಾರಾಯಣರವರು ಚಿತ್ರಕಲೆಯನ್ನು ಒಟ್ಟಿಗೆ ತಮ್ಮ ಮುತ್ತಾತ ತಿಪ್ಪಾಜಿಯವರ ಜೊತೆಯಲ್ಲಿ ಚಿತ್ರಕಲೆ ಮತ್ತು ಶಿಲ್ಪಕಲೆಯನ್ನು ಬಾಲ್ಯದಿಂದಲೆ ಒಟ್ಟಿಗೆ ಕಲಿಯುತ್ತಾ ಬಂದರು. ಅದರಲ್ಲೂ ಜ್ಞಾನೇಶ್ವರವರಿಗೆ ಶಿಲ್ಪಕಲೆ-ಚಿತ್ರಕಲೆಯಲ್ಲಿ ತುಂಬಾ ಆಸಕ್ತಿ ಇತ್ತು. ಜ್ಞಾನೇಶ್ವರವರಿಗೆ ಕಲಿಯುವ ಹಂತದಲ್ಲಿ ಜ್ಞಾನೇಶ್ವರವರು ಕಾಶಿನಾಥರವರ ಹತ್ತಿರ ಚಿತ್ರಕಲೆಯ ಬಗ್ಗೆ ಹೆಚ್ಚಿನ ಮಾಹಿತಿ ಮತ್ತು ಕಲೆಯ ಒಂದು ರೀತಿ-ನೀತಿಗಳನ್ನು ತಿಳಿಯುತ್ತಿದ್ದರು.

ಕಾಶಿನಾಥರವರು ಜ್ಞಾನೇಶ್ವರವರಿಗೆ ತಮಗೆ ತಿಳಿದ ಎಲ್ಲಾ ರೀತಿಯ ಚಿತ್ರಕಲೆಯ ವಿಷಯದ ವಿಶೇಷತೆಯನ್ನು ತಮ್ಮನಾದ ಜ್ಞಾನೇಶ್ವರವರಿಗೆ ತಿಳಿಸುವುದರೊಂದಿಗೆ ಅದರ ಒಂದು ಕಟ್ಟುಪಾಡನ್ನು ಸಹ ತಿಳಿಸುತ್ತಿದ್ದರು. ಕಾಶಿನಾಥರವರು ಮತ್ತು ಜ್ಞಾನೇಶ್ವರವರು, ನಾರಾಯಣರವರು ಬೆಳೆದು ಬಂದ ಮಲೆನಾಡಿನ ಪ್ರದೇಶದ ಪ್ರಕೃತಿ ಸೌಂದರ್ಯವು ಇವರ ಬಾಲ್ಯದ ಕಲಾಚಟುವಟಿಕೆಗೆ ಒಂದು ಸ್ಫೂರ್ತಿಯಾಗಿದೆ ಎಂದರೇ ತಪ್ಪಿಲ್ಲಾ ಕಾಶಿನಾಥ ಮತ್ತು ನಾರಾಯಣರವರು ಜ್ಞಾನೇಶ್ವರವರ ಕಲಾಕಲಿಕೆಯ ಹಂತದಲ್ಲಿ ಶಿಲ್ಪಗಳು ಮತ್ತು ಚಿತ್ರಗಳನ್ನು ರಚಿಸುವ ಸಮಯದಲ್ಲಿ ಯಾವ ಕಲಾಕೃತಿಗೆ ಯಾವ ರೀತಿಯ ಭಂಗಿ ಮತ್ತು ರೇಖಾಚಿತ್ರಗಳು, ಬಣ್ಣಗಾರಿಕೆ ಎಲ್ಲವನ್ನು ಜ್ಞಾನೇಶ್ವರ ಅವರಿಗೆ ಅಣ್ಣ ಕಾಶಿನಾಥರವರು ತಿಳಿಸುತ್ತಿದ್ದರು. ಮತ್ತು ಮುತ್ತಾತ ತಿಪ್ಪಾಜಿಯವರು ಕಾಷ್ಠ ಶಿಲ್ಪ, ಮಣ್ಣಿನ ಕಲ್ಲಿನ, ರೇಖಾಚಿತ್ರ, ವರ್ಣಚಿತ್ರ ಇವೆಲ್ಲವನ್ನು ಸಹ ತಮ್ಮ ಮೊಮ್ಮಕ್ಕಳಾದ ಕಾಶಿನಾಥ ಜ್ಞಾನೇಶ್ವರ, ನಾರಾಯಣರವರಿಗೆ ಪ್ರಾತ್ಯಕ್ಷಿಕೆಯ ಮೂಲಕ ತಿಳಿಸುತ್ತಿದ್ದರು. ಇದರಿಂದಾಗಿ ಜ್ಞಾನೇಶ್ವರವರಿಗೆ ಮನೆಯೇ ಒಂದು ಕಲಾ ಪಾಠಶಾಲೆಯಾಗಿತ್ತು. ಹಾಗೂ ಕಲಾ ಆಸಕ್ತಿಯನ್ನು ಹೊಂದಿರುವ ಅಣ್ಣ ಕಾಶಿನಾಥ ಮತ್ತು ನಾರಾಯಣರವರು ಇವರ ಜೊತೆಗೆ ಎಲ್ಲಾ ರೀತಿಯಾಗಿ ಕಲೆಯ ಬಗ್ಗೆ ಒಂದು ತಿಳುವಳಿಕೆಯನ್ನು ಜ್ಞಾನೇಶ್ವರವರ ತಿಳಿಯುತ್ತಾ ಬಂದರು. ಕಲೆಯ ಹಲವು ಮಾಧ್ಯಮಗಳನ್ನು ಅಂದರೆ

* ಕಾಷ್ಠ ಶಿಲ್ಪಗಳ ಒಂದು ಕಲಿಕೆ
* ಮಣ್ಣಿನ ಮಾಧ್ಯಮದ ಮಾಡುವ ರೀತಿ-ನೀತಿಗಳು
* ಕಲ್ಲಿನ ಶಿಲ್ಪಗಳ ಅಳತೆ ಹಾಗೂ ಆಕಾರದ, ಭಂಗಿಯ ಲಾಲ್ಯತೆ
* ರೇಖಾ ಚಿತ್ರಗಳ ರೇಖೆಗಳ ಒಂದು ಗೀಚುವಿಕೆ ಬಿಂದುವಿನ ಅಗತ್ಯತೆ
* ವರ್ಣಚಿತ್ರದಲ್ಲಿ ಬರುವ ಜಲವರ್ಣ, ಪೋಸ್ಟರ್‌ವರ್ಣ, ತೈಲವರ್ಣ, ಮಿಶ್ರ ಮಾಧ್ಯಮಗಳ ಬಗ್ಗೆ
* ಈ ಎಲ್ಲಾ ಕಲಾ ಪ್ರಕಾರಗಳನ್ನು ಜ್ಞಾನೇಶ್ವರವರು ಬಾಲ್ಯದಿಂದಲೇ ಕಲಿಯುತ್ತ ಮತ್ತು ತಿಳಿಯುತ್ತ ಬೆಳೆದರು.

ಮುಖ್ಯವಾಗಿ ಜ್ಞಾನೇಶ್ವರವರ ಮೇಲೆ ಪ್ರಭಾವ ಬೀರಿದ್ದು ಮನೆತನದಲ್ಲಿ ಬಂದ ಕಲೆ ಹಾಗೂ ಮುತ್ತಾತ ತಿಪ್ಪಾಜಿಯವರ ಸಂಗಾತ್ಯದ ಕಲಾ ಕಲಿಕೆ, ಮಲೆನಾಡಿನ ಪರಿಸರ ಬೇಲೂರು ಹಳೇಬೀಡಿನ ವಾಸ್ತುಶಿಲ್ಪಗಳ ಸೌಂದರ್ಯವನ್ನು ನೋಡುತ್ತ ಮತ್ತು ತಮ್ಮ ಕಲಿಕೆಯಲ್ಲಿ ಅವುಗಳನ್ನು ಜ್ಞಾನೇಶ್ವರವರು ಬಳಸಿಕೊಂಡರು.

ಇಂತಹ ಕಲಾಭಿರುಚಿ ಇರುವ ಅಣ್ಣ ತಮ್ಮದಿರ ಜೊತೆಗೆ ಕೆ. ಜ್ಞಾನೇಶ್ವರವರು ಬೆಳೆದಿದ್ದು ಮತ್ತು ಅವರ ಕಲಾ ಬದುಕಿನ ಒಂದು ರೀತಿಯ ಅಡಿಪಾಯ ಎಂದರೇ ತಪ್ಪಾಗಲಾರದು. ಈ ರೀತಿಯಲ್ಲಿ ಅಣ್ಣ ಕಾಶೀನಾಥರವರು ಬಾಲ್ಯದಿಂದ ಕೆ.ಜ್ಞಾನೇಶ್ವರವರನ್ನು ಮತ್ತು ನಾರಾಯಣರವರನ್ನು ತಮ್ಮ ಜೊತೆಯಲ್ಲಿ ಇರಿಸಿಕೊಂಡು ಕಲೆಯ ಬಗ್ಗೆ ತಿಳಿಸುತ್ತಿದ್ದರು. ಹಾಗೂ ಹೆಚ್ಚಿನ ಗೊಂದಲವಾದರೆ ಅದನ್ನು ತಿದ್ದುವುದಕ್ಕೆ ಅವರ ಮುತ್ತಾತ ತಿಪ್ಪಾಜಿಯವರು ಅವರ ಜೊತೆಗೆ ಇದ್ದರು ತಾತಾನವರು ಪರಶುರಾಮಪ್ಪ, ತಂದೆ ಕೃಷ್ಣರಾವ್ ಅವರು ಪ್ರೋತ್ಸಾಹಿಸುತ್ತಿದ್ದರು. ಆ ಬಾಲ್ಯದ ದಿನಗಳು ಆಟ-ಪಾಠ ಕಲಾಶಿಕ್ಷಣ ಮನೆಯಲ್ಲಿರುವ ವಾತಾವರಣ ಎಲ್ಲವು ಕಲೆಯನ್ನು ಕಲಿಯುವ ಹುರುಪನ್ನು ನೀಡಿತು ಎಂದು ಕೆ. ಜ್ಞಾನೇಶ್ವರವರು ಹೇಳುತ್ತಾರೆ.

**ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದ ದಿನಗಳು**

'ಶಿಕ್ಷಣ' ಎಂಬ ಪದಕ್ಕೆ ಇಂದು ಉದ್ಯೋಗದ ಅರ್ಥವನ್ನೇ ನೀಡಲಾಗಿದೆ. ಶಿಕ್ಷಣ ಪಡಿಯುವುದು ಉದ್ಯೋಗಕ್ಕೆ ಎಂತಲೇ ಭಾವಿಸಲಾಗಿದೆ. ಆದರೆ ನಮ್ಮ ಪುರಾತನ ಸಂದರ್ಭದಲ್ಲಿ ಶಿಕ್ಷಣವು ಬದುಕಿಗಾಗಿ ಸಂಸ್ಕೃತಿ ಸಂವರ್ಧನೆಗಾಗಿ ಕಲಿಸಿಕೊಡುವುದೇ ಆಗಿದೆಯೆಂದು ನಮ್ಮ ದಕ್ಷಣಿಕರು ಹೇಳಿದ್ದನ್ನು ಅನೇಕ ಗ್ರಂಥಗಳಲ್ಲಿ ನೋಡಬಹುದು. ಶಿಕ್ಷಣಕ್ಕೆ ಪರ್ಯಾಯವಾಗಿ ಉದ್ಯೋಗದ ಅರ್ಥವನ್ನು ನೀಡಿದ್ದ ಭಾರತದ ಇಂದಿನ ಸಂದರ್ಭದ ಈ ಸ್ಥಿತಿಗೆ ಕಾರಣವಾಗಿರ ಬಹುದು.

ಬಾಲ್ಯದಲ್ಲಿನ ಪ್ರಾಥಮಿಕ ಶಿಕ್ಷಣ ಆ ಮಗುವಿನ ಭವಿಷ್ಯವನ್ನೇ ರೂಪಿಸುತ್ತದೆ. ಕಾರಣ ಬಾಲ್ಯದಲ್ಲಿಯೇ ಅವನ ಅಭಿರುಚಿಗಳು ಅವನ ಬರವಣಿಗೆ, ವರ್ತನೆ ಇತ್ಯಾದಿಗಳ ಮೂಲಕ ಬೆಳಕಿಗೆ ಬರಲಾರಂಭಿಸುತ್ತವೆ. ಇವುಗಳನ್ನು ಗುರುತಿಸಿ ಅವುಗಳನ್ನೇ ಪ್ರೋತ್ಸಾಹಿಸುವ ಪ್ರವೃತ್ತಿ ಇಂದಿನ ಸಂದರ್ಭದ ಶಿಕ್ಷಣದಲ್ಲಿ ಅಪರೂಪವಾಗುತ್ತಿದೆ. ತಂದೆ-ತಾಯಿಗಳ ಆಸೆಯಂತೆಯೇ ತನ್ನ ಶಿಕ್ಷಣವನ್ನು ಪೂರೈಸುವ ಮಗು 'ಕಾರ್ಖಾನೆ'ಯ ಒಂದು ಉತ್ಪನ್ನದಂತಾಗಿದೆ. ಮಗುವಿನ ಅಭಿರುಚಿಗೆ ತಕ್ಕಂತೆ ಶಿಕ್ಷಣವನ್ನು ಪಡೆಯುವುದು ಇಂದಿನ ಸಂದರ್ಭದಲ್ಲಿ ಆಗುತ್ತಿಲ್ಲವೆಂಬುದನ್ನು ನಾವು ಮಗುವಿನ ಸ್ವಾತಂತ್ರ್ಯ ಹರಣವೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಅಭಿನವ ಗುಪ್ತನಿಗೆ ತಣಿಸಲಾಗದ ವಿದ್ಯಾಶಕ್ತಿಯೊಂದಿತ್ತು. ಅವನು ವಿವಿಧ ಶಾಸ್ತ್ರಗಳನ್ನು ವಿಭಿನ್ನ ಗುರುಗಳಲ್ಲಿ ಮಾಡಿದ. ಮತ್ತು ಅದಕ್ಕಾಗಿ ಕಾಶ್ಮೀರಕ್ಕೂ ಹೋಗಿ ಸ್ವತಃ ಪರಿಪೂರ್ಣತೆಯನ್ನು ಸಾಧಿಸಿ ತನ್ನ ಶಿಷ್ಯನನ್ನೂ ಸುಲಭವಾಗಿ ಅಲ್ಲಿಗೆ ಕೊಂಡೊಯ್ಯಲು ಸಮರ್ಥನಾದ ಗುರುವೊಬ್ಬನನ್ನು ಒಳ್ಳೆಯ ಅದೃಷ್ಟದಿಂದ ಪಡೆದರು. ಇತರೆ ಶಾಸ್ತ್ರಗಳು ಇತರ ಮಾರ್ಗಗಳ ಜ್ಞಾನವನ್ನು ಸಂಪಾದಿಸಲು ಇತರ ಗುರುಗಳ ಬಳಿಗೆ ಹೋಗಬಾರರದೆನ್ನುವುದು ಅದರ ಅರ್ಥವಲ್ಲ ಎಂದು ಅವನ್ನು ತಂತ್ರಾಲೋಕದಲ್ಲಿ ಹೇಳುತ್ತಾನೆ. ಇದನ್ನು ಅವನು ತನ್ನ ಉಪದೇಶ ಮತ್ತು ಆಚರಣೆ ಮೂಲಕ ಭೋಧಿಸಿದ. ಏಕೆಂದರೆ ಶೈವಶಾಸ್ತ್ರಗಳು ತತ್ವಗಳು ಮತ್ತು ಉಪದೇಶಗಳು ಅವನಿಗೆ

ಪೂರ್ಣ ತೃಪ್ತಿಯನ್ನು ನೀಡದಿದ್ದರೂ ಕುತೂಹಲ ಮತ್ತು ತಣಿಯದ ಜ್ಞಾನ ದಾಹಗಳಿಂದಾಗಿ ಅವನು ಇತರ ಪಂಥಗಳ ಬೌದ್ಧ ಹಾಗೂ ಜೈನ ಗುರುಗಳ ಅಡಿಯಲ್ಲಿ ಅಧ್ಯಯನ ಮಾಡಿದ.[೧೦]

ಕಲಾವಿದ ಕೆ. ಜ್ಞಾನೇಶ್ವರವರು ತಮ್ಮ ಬಾಲ್ಯ ಜೀವನವನ್ನು ತಮ್ಮ ತಾಯಿಯ ತವರೂರಾದ ಶಿಕಾರಿಪುರದಲ್ಲಿ ಕಳೆದರು. ಅಲ್ಲಿಯೇ ಪ್ರಾಥಮಿಕ ಶಿಕ್ಷಣ ಹಾಗೂ ಪ್ರೌಢಶಿಕ್ಷಣವನ್ನು ಪಡೆದರು. ಕೆ. ಜ್ಞಾನೇಶ್ವರವರು ಕಲಿಯುವ ಹಂತದಲ್ಲಿ ಚಿತ್ರಕಲೆಯು ಒಂದು ವಿಷಯವಾಗಿತ್ತು. ಅದನ್ನು ಕಲಿಸಲು ಪ್ರತ್ಯೇಕ ಗುರುಗಳು ಮತ್ತು ಅದರದೇ ಆದ ಕೋಣೆಯೊಂದು ಇತ್ತು. ಎಲ್ಲಾ ಪಾಠದ ತರಗತಿಗಳು ಮುಗಿದ ಮೇಲೆ ಸಂಜೆಯ ವೇಳೆಗೆ ಚಿತ್ರಕಲೆಯನ್ನು ಕಲಿಯಲು ಅವಕಾಶ ಮಾಡಿಕೊಡುತ್ತಿದ್ದರು. ಕೆ. ಜ್ಞಾನೇಶ್ವರವರು ತಮ್ಮ ಕೆಲವು ಸ್ನೇಹಿತರೊಡನೆ ಸೇರಿ ತುಂಬಾ ಆಸಕ್ತಿಯಿಂದ ಚಿತ್ರಕಲೆಯನ್ನು ಕಲಿಯುತ್ತಿದ್ದರು. ಹಾಗೆ ಜ್ಞಾನೇಶ್ವರವರ ಅಣ್ಣ ಕಾಶಿನಾಥ ಮತ್ತು ತಮ್ಮ ಕೆ. ನಾರಾಯಣ ಎಲ್ಲರೂ ತರಗತಿಗಳು ಮುಗಿದ ಮೇಲೆ ಮನೆಗೆ ಹೋಗುತ್ತಿದ್ದರು. ಅಲ್ಲಿಯ ಮುತ್ತಾತ ತಿಪ್ಪಾಜಿಯವರ, ತಾತ ಪರಶುರಾಮಪ್ಪ ತಂದೆ ಕೃಷ್ಣರಾವ್ ಎಲ್ಲರು ಕಲಾವಿದರು ಆದ್ದರಿಂದ ಕೆ. ಜ್ಞಾನೇಶ್ವರವರಿಗೆ ಬಾಲ್ಯದಿಂದಲೇ ಶಾಲೆಯಲ್ಲೂ ಮತ್ತು ಮನೆಯಲ್ಲಿಯೂ ಕಲಾ ಶಿಕ್ಷಣ ದೊರೆಯುತ್ತಿತ್ತು. ಶಾಲೆಯಲ್ಲಿ ಕಲೆಯನ್ನು ಕಲಿಸುವ ಗುರುಗಳು ಕಲೆಯ ವಿನ್ಯಾಸಗಳನ್ನು ಹಾಕಿ ತೋರಿಸುವಾಗ ಕೆ. ಜ್ಞಾನೇಶ್ವರವರು ಗಮನವಿಟ್ಟು ನೋಡುತ್ತಿದ್ದರು. ಮತ್ತು ಅದೇರೀತಿಯಲ್ಲಿ ಚಿತ್ರಕಲೆಯನ್ನು ಅಭ್ಯಾಸ ಮಾಡುತ್ತಿದ್ದರು. ಅವರು ೧೦ನೇ ತರಗತಿಯ ವರೆಗೆ ಮಾತ್ರ ಶಿಕಾರಿಪುರದಲ್ಲಿ ಓದಿದರು. ನಂತರ ಪಿ.ಯು.ಸಿ. ಕಲಿಯಲು ದೂರದ ಬೆಂಗಳೂರಿಗೆ ತಂದೆ–ತಾಯಿ ಕೆ. ಜ್ಞಾನೇಶ್ವರವರನ್ನು ಕಲಿಸಿದರು. ಏಕೆಂದರೆ ಅಣ್ಣನಾದ ಕಾಶಿನಾಥ ಮೂರನೇ ತರಗತಿಗೆ ಸಾಕುಮಾಡಿ ವಿದ್ಯಾಭ್ಯಾಸವನ್ನು ತ್ಯಜಿಸಿದರು. ಅದೇ ಬೇಜಾರಿಗೆ ತಂದೆ ಕೃಷ್ಣರಾವ್‌ರವರು ಮಗ ಜ್ಞಾನೇಶ್ವರವರನ್ನು ಬೆಂಳೂರಿನ ವಿಜ್ಞಾನ ವಿಭಾಗ ಪಿ.ಯು.ಸಿ.ಗೆ ಸೇರಿಸಿ ಬಂದರು. ತಂದೆಯ ಆಸೆಯಂತೆ ಜ್ಞಾನೇಶ್ವರವರು ಪಿ.ಯು.ಸಿ.ಯನ್ನು ಒಳ್ಳೆ ರೀತಿಯಿಂದ ಮುಗಿಸಿ ಪಾಸಾಗಿದ್ದರು. ಜೊತೆಯಲ್ಲಿ ಕಲಾಶಿಕ್ಷಣವನ್ನು ಸಹ ಪಡೆಯುತ್ತ ಇವರು ತಂದೆಯ ಆಸೆಯಂತೆ ಬಿ.ಎಸ್. ಮಾಡಲು ಹುಬ್ಬಳ್ಳಿಗೆ ತೆರಳಿದರು. ನಂತರ ತಮ್ಮ ಆಸೆಯಂತೆ ಕಲಾಶಿಕ್ಷಣವನ್ನು ಪಡೆದರು.

ಭಾರತದದಲ್ಲಿ ಇತಿಹಾಸವು ಇತ್ತೀಚಿನ ಶತಮಾನದಲ್ಲಷ್ಟೆ ಬೆಳೆದು ಬಂದಿದೆ. ಅದೂ ಪಡುವಣದಿಂದ ಬಂದು ವಿಕ್ಟೋರಿಯನ್ ಕಲಾಶಿಕ್ಷಣವನ್ನು ನಾವು ಅನಿವಾರ್ಯವಾಗಿ ಒಪ್ಪಿಕೊಂಡಿದ್ದು ಆಗಿದೆ. ಆಂಗ್ಲರು ಭಾರತೀಯರನ್ನು ಆಳುತ್ತಿರುವಾಗಲೇ ತಮ್ಮದೇ ಶೈಕ್ಷಣಿಕ ಪದ್ಧತಿಯನ್ನು ಒತ್ತಾಯವಾಗಿ ಭಾರತದಲ್ಲಿ ಭಿತ್ತಿದರು. ಅದರ ಪರಿಣಾಮವಾಗಿ ಮದ್ರಾಸ್, ಮುಂಬಯಿ, ಕಲ್ಕತ್ತಾ, ಲಾಹೋರ್‌ಗಳಲ್ಲಿ ಆಂಗ್ಲ ಕಲಾವಿದ ಅಧಿಕಾರಿಗಳ ಉಸ್ತುವಾರಿಯಲ್ಲಿ ಕಲಾಶಾಲೆಗಳು ಹುಟ್ಟಿಕೊಂಡವು. ಹೀಗೆ ಕರ್ನಾಟಕದಲ್ಲಿಯ ಅನೇಕ ಕಲಾಶಾಲೆಗಳು ತೆರೆದುಕೊಂಡವು

೧೦. ಕಲಾವಿದ ಜ್ಞಾನೇಶ್ವರವರೊಂದಿಗೆ ಸಂದರ್ಶನ

ಅದರಲ್ಲಿ ಒಂದಾದ ಡಾ. ಎಂ.ವಿ. ಮಿಣಜಗಿಯವರ ಹುಬ್ಬಳ್ಳಿಯ ವಿಜಯ ಮಹಾಂತೇಶ ಕಲಾಮಂದಿರದ ವಿದ್ಯಾರ್ಥಿಯಾದರು ಕೆ. ಜ್ಞಾನೇಶ್ವರವರು ಅಲ್ಲಿ ಬಿ.ಎಫ್.ಎ. ಮೂರು ವರ್ಷದ ಅಧ್ಯಯನವನ್ನು ಸಿ.ಬಿ. ಜಾಬಿನ್ ಕಾಲೇಜ್‌ನಲ್ಲಿ ಬಿ.ಎಸ್.ಸಿ.ಯನ್ನು ಜೊತೆಯಲ್ಲೇ ಎರಡು ಕೋರ್ಸ್‌ಗಳನ್ನು ಹುಬ್ಬಳ್ಳಿಯಲ್ಲಿ ಕೆ. ಜ್ಞಾನೇಶ್ವರವರು ಮಾಡಿದರು.

ಇದು ಔಪಚಾರಿಕ ಶಿಕ್ಷಣದ ಚೌಕಟ್ಟು ಮಾತ್ರ. ಅವರು ಶಾಲೆಯಲ್ಲಿ ಕಲಿತಿದ್ದು ಅಲ್ಪ. ಅದು ಅಕಾಡೆಮಿಕ್ ವಾತಾವರಣದ್ದು. ಅವರ ಕಲಾಭ್ಯಾಸದ ಜೀವಂತ ಶಾಲೆ ಶಿಕಾರಿಪುರದ ಬಾಲ್ಯದ ದಿನಗಳು ಹಾಗೂ ಅಲ್ಲಿನ ಆಟ, ನೋಟ, ಉತ್ಸಾಹದ ಸಾಹಸಗಳು, ಪಡೆದ ಅನುಭವಗಳು ಕಲಾವಿದ ಕೆ. ಜ್ಞಾನೇಶ್ವರವರನ್ನು ರೂಪಿಸಿದವು. ಒಳಮನಸ್ಸಿನ ಮೇಲೆ ಗಾಢವಾದ ಪರಿಣಾಮವನ್ನು ಬೀರಿದವು. ಅಂದಿನಿಂದ ಇಂದಿನವರೆಗೂ ಪ್ರಭಾವದಿಂದ ಅವರು ಹೊರಬರಲು ಸಾಧ್ಯವಾಗಿಲ್ಲ. ಅವರು ಶಾಲೆಯಲ್ಲಿ ಕಲಿತದ್ದಕ್ಕಿಂತ ಹೊರಗಡೆ ಕಲಿತದ್ದು ಹೆಚ್ಚು. ಕೆ. ಜ್ಞಾನೇಶ್ವರವರಿಗೆ ವಿಜಯಮಹಾಂತೇಶ ಕಲಾಮಂದಿರದಲ್ಲಿ 'ಹಳೆಜೋಳ' ಎಂಬುವ ಗುರುಗಳು ಸಿಕ್ಕರು. ಅವರಿಂದ ವ್ಯಕ್ತಿಚಿತ್ರಣ, ಭಾವಚಿತ್ರಣ ಅನೇಕ ಬಗೆಯ ರೇಖಾಚಿತ್ರಗಳನ್ನು ಕೆ. ಜ್ಞಾನೇಶ್ವರವರು ಕಲಿತರು. ಜ್ಞಾನೇಶ್ವರವರು ತಮ್ಮ ಕಲಾಶಿಕ್ಷಣದಲ್ಲಿನ ಅನುಭವಗಳನ್ನು ಒಂದೆಡೆ ಹೀಗೆ ಹೇಳುತ್ತಾರೆ. ನಾವು ಅಭ್ಯಾಸ ಮಾಡುವಾಗ ಕಲಾಕೃತಿಗಳನ್ನು ಪರೀಕ್ಷಾ ದೃಷ್ಟಿಯಿಂದ ಅಥವಾ ಮತ್ತೊಬ್ಬರ ಮೆಚ್ಚುಗೆಗಳಿಸಲು ಮಾಡುವಂಥ ಪ್ರವೃತಿ ಇತ್ತು. ಚಿತ್ರರಚನೆಯ ಉದ್ದೇಶವನ್ನು ವಿಷಯದ ದೃಷ್ಟಿಯಿಂದ ನೋಡುತ್ತಿದ್ದೇವೆ. ಇದಕ್ಕಿಂತ ಭಿನ್ನವಾಗಿ ಏನೂ ನೋಡುತ್ತಿರಲಿಲ್ಲ. ಅಂದರೆ ಅಲಂಕಾರದ, ವ್ಯಾಕರಣದ ದೃಷ್ಟಿಯಿಂದ ನೋಡುತ್ತಿರಲಿಲ್ಲ.[೧೧] ಚಿತ್ರ ಬರೆಯಲು ಸರಳವಾದಂತಹ ಪದ್ಧತಿಯನ್ನು ಅನುಸರಿಸುತ್ತಿದ್ದೆವು. ಅದಕ್ಕೆ ಕಾರಣ ಅಂದಿನ ಶಿಕ್ಷಣ, ಬೇರೆಯವರ ಕಲಾಕೃತಿಗಳನ್ನು ಬೇರೆ ಬೇರೆ ರೀತಿಯಿಂದ ನೋಡುವ ದೃಷ್ಟಿಕೋನಗಳನ್ನು ಬೆಳೆಸಿರಲಿಲ್ಲ. ಕಲಾಕೃತಿಯೊಂದನ್ನು ವಿಂಗಡಿಸಿ ನೋಡುವಾಗ ಅದರಲ್ಲಿನ ಯಾವ ಅಂಶವನ್ನು ಬಿಡಬೇಕು, ಯಾವ ಅಂಶವನ್ನು ಸ್ವೀಕರಿಸಬೇಕು ಎಂಬುದಕ್ಕೆ ಉತ್ತರವಿರಲಿಲ್ಲ. ಚಿತ್ರ ನಿರ್ಮಾಣದ ಸಂದರ್ಭದಲ್ಲಿನ ಕಾಲ ಬಳಸಿದ ಸಾಮಗ್ರಿ, ಮಾನಸಿಕ ಸ್ಥಿತಿಗೆ ಸಬಂಧಿಸಿದಂತೆ ಇವು ನೋಡುಗನಲ್ಲಿ ಯಾವ ರೀತಿ ಕಾರ್ಯನಿರ್ವಹಿಸುತ್ತವೆ ಎಂಬುದರ ಬಗ್ಗೆ ಆಂತರಿಕವಾಗಿ ಅನಿಸುತ್ತಿದ್ದರೂ ಬಹಿರಂಗವಾಗಿ ಪ್ರಶ್ನೆಗಳಿರಲಿಲ್ಲ'.

ಅಂದಿನ ಶೈಕ್ಷಣಿಕ ಸಂದರ್ಭದಲ್ಲಿ ವಿಶೇಷವೆನಿಸುವ ವಿಷಯಗಳು ಇರುತ್ತಿದ್ದವು. ಆದರೆ ಭಾರತೀಯ ಕಲಾಕೃತಿಗಳಲ್ಲಿನ ಲಕ್ಷಣಗಳು ಯಾವುವು? ಅವುಗಳನ್ನು ಹೇಗೆ ಗುರುತಿಸುವುದು? ಕಡೇ ಪಕ್ಷ ಹತ್ತು ಲಕ್ಷಣಗಳನ್ನಾದರು ಹೇಳಿ ಎಂದರೆ ಯಾರೂ ಕೂಡ ಈ ಕುರಿತು ನಿಖರವಾಗಿ ಹೇಳುತ್ತಿರಲಿಲ್ಲ. ಇದು ಕೂಡ ಕಷ್ಟಕರವಾಗಿತ್ತು. ಭಾರತೀಯ ಚಿತ್ರಕಲಾಕೃತಿಯ ವಿಷಯ ಅಂದರೆ ಪುರಾಣವನ್ನು ಅಥವಾ ಕಥೆಗಳನ್ನು ಆಧರಿಸಿಯೇ ಚಿತ್ರದಲ್ಲಿನ ರೂಪಗಳ ಹಿನ್ನೆಲೆಯನ್ನು

೧೧. ಕಲಾವಿದ ಜ್ಞಾನೇಶ್ವರವರೊಂದಿಗೆ ಸಂದರ್ಶನ

ಹೇಳುತ್ತಿದ್ದರು. ಆದರೆ ತಾಂತ್ರಿಕ ವಿಶೇಷತೆಗಳ ಕುರಿತಾಗಿ ಏನೂ ಹೇಳುತ್ತಿರಲಿಲ್ಲ. ಇದರಿಂದ ನಮಗೆ ಕಲೆಯ ಕುರಿತಾಗಿ ವಿಶೇಷ ಪರಿಣಿತಿ ದೊರೆಯುವುದಿಲ್ಲ. ಆದ್ದರಿಂದ ಭಾರತದಲ್ಲಿ ಬಹುಮಟ್ಟಿಗೆ ಹೇಳುವುದಾದರೆ ತಾಂತ್ರಿಕತೆಗಳಲ್ಲಿ ಒಂದೇ ರೀತಿಯ ಶೈಲಿಗಳು ಬಂದಿವೆ. ಅದು ನಿಲ್ಲಬೇಕಾದರೆ ವರುಷಗಳೇ ಬೇಕಾಗಬಹುದು. ಅದಕ್ಕೆ ಸಲಕರಣೆಗಳಲ್ಲಿನ ಬದಲಾವಣೆ ಬಹಳ ವರುಷಗಳಿಂದ ಆಗಿದೆ. ಉದಾಹರಣೆಗಾಗಿ ಹೇಳುವುದಾದರೆ ಒಂದು ಚಿತ್ರಗಳನ್ನು ಸಾಮೂಹಿಕವಾಗಿ ರಚಿಸಿದ್ದು ಒಂದಾದರೆ, ವೈಯಕ್ತಿಕವಾಗಿ ರಚಿಸಿದ್ದು ಇನ್ನೊಂದು. ರಚಿಸುವಂತಹ ವಿಧಾನ ಸಲಕರಣೆಗಳ ಸಿದ್ದಪಡಿಸುವಿಕೆ ಇಂತಹ ಹಂತಗಳು ಕೇವಲ ಪ್ರಾಥಮಿಕವಾಗಿ ಉಳಿದವು. ಆದರೆ ಇಂದಿನ ಬೆಳೆವಣಿಗೆಗೆ ತಕ್ಕಂತೆ, ಆಧುನಿಕ ಪರಿಕರಗಳಿಗೆ ತಕ್ಕಂತೆ ಚಿತ್ರಗಳನ್ನು ರಚಿಸುವ ಸಾಧ್ಯತೆಗಳ ಬಗ್ಗೆ ಅಂದು ಯೋಚಿಸಲಿಲ್ಲ. ಆದ್ದರಿಂದ ನಿರ್ದಿಷ್ಟ ಚೌಕಟ್ಟಿನೊಳಗೆ ಅಧ್ಯಯನ ಮಾಡುವಂತಹ ಪ್ರವೃತ್ತಿ ಇತ್ತು ಇನ್ನೊಬ್ಬರು ರಚಿಸಿದಂತಹ ಕೃತಿಯನ್ನೇ ನಾನೂ ರಚಿಸಿಬಿಟ್ಟರೆ ಸಾಕು. ಅವರ ಮಟ್ಟದಲ್ಲಿಯೇ ನಾನು ಇದ್ದೇನೆ ಎಂಬ ಭಾವನೆ ನಮಗಿತ್ತು. ನಾನು ಅವನಿಗಿಂತ ಭಿನ್ನವಾಗಿದ್ದೇನೆ, ಅವನಿಗಿಂತ ಭಿನ್ನವಾಗಿ ಕಲಾಕೃತಿಗಳನ್ನು ರಚಿಸಬೇಕು, ಭಿನ್ನವಾಗಿ ನಾನು ಬೆಳೆಯಬೇಕು ಎಂಬ ಕಲ್ಪನೆ ಅಂದು ಇರಲಿಲ್ಲ. ಏಕೆಂದರೆ ಆಗಿನ ಪರಿಸರವೇ ಹಾಗಿತ್ತು. ಕುತೂಹಲದ ಪ್ರವೃತ್ತಿಯೇ ಇಂದು ಕೆ. ಜ್ಞಾನೇಶ್ವರವರ ವ್ಯಕ್ತಿತ್ವವನ್ನು ಬೆಳೆಸಿದೆ. ಕೆ. ಜ್ಞಾನೇಶ್ವರವರ ಮೂಲ ತುಡಿತ ಇರುವುದೇ ಸಾಂಪ್ರದಾಯಿಕ ಗೊಡ್ಡು ಎನಿಸುವ ಚಿತ್ರರಚನಾ ವಿಧಾನಗಳನ್ನು ಅನುಸರಿಸುವುದು ಅವರ ಅಪೇಕ್ಷೆಯಾಗಿತ್ತು. ಪ್ರತಿರಚನೆಯಲ್ಲೂ ಬದಲಾವಣೆ ಹೊಸತನ, ತಾಂತ್ರಿಕ ನೈಪುಣ್ಯತೆ ಹಾಗೂ ಭಿನ್ನ ದೃಷ್ಟಿಕೋನಗಳನ್ನು ಒಳಗೊಂಡ ದೃಶ್ಯಭಾಷೆ ಬೇಕಿತ್ತು. ಆದರೆ ಅವರ ಅನುಭವಗಳ ಪ್ರಕಾರ ಬಾಲ್ಯ ಜೀವನ ಮತ್ತು ವಿದ್ಯಾರ್ಥಿ ಜೀವನದ ಪ್ರಯೋಗಶೀಲ, ಕ್ರಿಯಾಶೀಲತೆ ಇಂದಿಗೂ ಅವರನ್ನು ಅದೇ ದಾರಿಯಲ್ಲಿ ಕರೆದುಕೊಂಡು ಹೋಗುತ್ತಿರುವುದನ್ನು ಅವರ ಕಲಾರಚನೆಯಲ್ಲೇ ಕಾಣಬಹುದಾಗಿದೆ. ಕೆ. ಜ್ಞಾನೇಶ್ವರವರು ಮಲೆನಾಡಿನ ಚಿತ್ರ ಮತ್ತು ಶಿಲ್ಪಕಲಾವಿದರಾಗಿ ದೊಡ್ಡ ಸಾಧನೆಯನ್ನು ಮಾಡುವ ಆಸೆ, ಆಸಕ್ತಿಯನ್ನು ಎಂದಿಗೂ ಹೊಂದಿದವರಲ್ಲ. ಏಕೆಂದರೆ ಯಾರಿಗೂ ಗೊತ್ತಿರುವುದಿಲ್ಲ ಬಾಲ್ಯದ ಜೀವನದಿಂದ ಮತ್ತು ದೊಡ್ಡವರು ಆಗುವ ಮಧ್ಯ ಸಮಯದಲ್ಲಿ ಮನುಷ್ಯನ ಮನಸ್ಸು ಯಾವ ರೀತಿಯ ಆಲೋಚನೆ ಮಾಡುತ್ತದೆ ಎಂದು ಹೇಳುವುದು ಸಾಧ್ಯವಿಲ್ಲ. ಆದರೆ ತಂದೆಯ ಆಸೆಯಂತೆ ವಿಜ್ಞಾನ ವಿಭಾಗದಲ್ಲಿ ರ್‍ಯಾಂಕ್ ಪಡೆದು ಹುಬ್ಬಳ್ಳಿ ಸಿ.ಬಿ. ಜಾಬಿನ್ ಕಾಲೇಜಿನಲ್ಲಿ ಬಿ.ಎಸ್.ಸಿ. ಮಾಡಲು ಹೋಗುತ್ತಾರೆ. ನಂತರ ಅದೇ ಹುಬ್ಬಳ್ಳಿಯ ಮಿಣಜಿಗಿಯವರ ಸ್ಥಾಪಿಸಿದ ವಿಜಯಮಹಾಂತೇಶ ಚಿತ್ರಕಲಾ ಮಹಾವಿಶ್ವವಿದ್ಯಾಲಯದಲ್ಲಿ ಬಿ.ಎಫ್.ಎ.ಯನ್ನು ಕಲಿಯಲು ಕೆ. ಜ್ಞಾನೇಶ್ವರವರು ಇಚ್ಚಿಸುತ್ತಾರೆ. ಅವರ ಆಸೆಯಂತೆ ಚಿತ್ರಕಲಾ ವಿದ್ಯಾಲಯದಲ್ಲಿ ಅವರಿಗೆ ಚಿತ್ರಕಲೆಯನ್ನು ಕಲಿಯುವ ಅವಕಾಶವನ್ನು ಹಳೆಜೋಳರವರು ಒದಗಿಸಿಕೊಡುತ್ತಾರೆ. ಆದು ಬಿ.ಎಸ್.ಸಿ.ಕ್ಲಾಸ್ ಮುಗಿದ ನಂತರ ಬಿ.ಎಫ್.ಎ. ಕ್ಲಾಸ್‌ನ್ನು ಕಲಿಯಲು ಅವಕಾಶ ದೊರೆತಾಗ ಕೆ. ಜ್ಞಾನೇಶ್ವರವರಿಗೆ ತುಂಬಾ ಸಂತೋಷವಾಗುತ್ತದೆ.

ಬಿ.ಎಸ್.ಸಿ ಮತ್ತು ಬಿ.ಎಫ್.ಎ. ಯನ್ನು ಒಟ್ಟಾಗಿ ಕಲಿಯಲು ಪ್ರಾರಂಭಿಸುತ್ತಾರೆ. ವಿಜಯ ಮಹಾಂತೇಶ ಕಾಲೇಜಿನಲ್ಲಿ ಕೆ. ಜ್ಞಾನೇಶ್ವರವರಿಗೆ ಹಳೆಜೋಳ ಎಂಬ ಚಿತ್ರಕಲೆ ಕಲಿಸುವ ಗುರುಗಳು ದೊರಕುತ್ತಾರೆ. ಅವರಿಗೆ ಕೆ. ಜ್ಞಾನೇಶ್ವರವರನ್ನು ಕಂಡರೆ ಹಳೆಜೋಳ ಅವರಿಗೆ ಪ್ರೀತಿ ಮತ್ತು ಅಭಿಮಾನ ಹಾಗೂ ಪ್ರೀಯ ಶಿಷ್ಯರಾಗಿದ್ದರು. ಜ್ಞಾನೇಶ್ವರವರಿಗೆ ಹಳೆಜೋಳ್ ಅವರು ಭಾವಚಿತ್ರಣ, ವ್ಯಕ್ತಿಚಿತ್ರಣ ಹಾಗೂ ಲಿಥೋಗ್ರಫಿಯನ್ನು ಕಲಿಸುತ್ತಿದ್ದರು. ಬಾಲ್ಯದಿಂದಲೇ ಕೆ. ಜ್ಞಾನೇಶ್ವರವರು ಕಲೆಯ ಜ್ಞಾನವನ್ನು ಬೆಳೆಸಿಕೊಂಡು ಬಂದವಾಗಿದ್ದರು. ಮತ್ತು ಅವರ ಮನೆತನವೇ ಕಲೆಗಾಗಿ ಮುಡಿಪಾಗಿಟ್ಟಿದ್ದರು. ಕೆ. ಜ್ಞಾನೇಶ್ವರವರಿಗೆ ರೇಖಾಜ್ಞಾನ, ಪ್ರಮಾಣ, ವಿನ್ಯಾಸಗಳು ಎಲ್ಲವು ತಿಳಿದಿತ್ತು. ಆದ್ದರಿಂದ ಹಳೆಜೋಳರವರು ಕಲಿಸುವ ಚಿತ್ರಗಳನ್ನು ಕಲಿಯಲು ಜ್ಞಾನೇಶ್ವರವರಿಗೆ ಕಷ್ಟವೆನಿಸುತ್ತಿರಲಿಲ್ಲ. ಹಳೆಜೋಳರವರು ನಮ್ಮ ನಾಡಿನ ಸಂಸ್ಕೃತಿಯನ್ನು ಮತ್ತು ಸಾಂಪ್ರದಾಯಿಕವಾಗಿ ಇರುವ ವ್ಯಕ್ತಿಗಳನ್ನು ಗೌರವಿಸುತ್ತಿದ್ದರು. ಆ ಎಲ್ಲಾ ಲಕ್ಷಣಗಳು ಕೆ. ಜ್ಞಾನೇಶ್ವರವರಲ್ಲಿ ಹಳೆಜೋಳರವರು ಕಂಡರು. ಜ್ಞಾನೇಶ್ವರವರು ಸಾಂಪ್ರದಾಯಿಕ ಶೈಲಿಯಲ್ಲಿ ಚಿತ್ರಗಳನ್ನು ಚಿತ್ರಿಸುತ್ತಿದ್ದರು. ಮತ್ತು ಸಮಕಾಲೀನ ವಾತಾವರಣಕ್ಕೆ ಹೊಂದಿಕೊಂಡು ತಮ್ಮ ಕಲಾಕೃತಿಗಳಲ್ಲಿ ತಮ್ಮ ತನವನ್ನು ಅಂದರೆ ತಮ್ಮ ಶೈಲಿಯನ್ನು ಅಳವಡಿಸಿಕೊಂಡ ಕಲಾಕೃತಿಗಳನ್ನು ರಚಿಸುವುದನ್ನು ಕೆ. ಜ್ಞಾನೇಶ್ವರವರು ಬಿಡಲಿಲ್ಲ. ಹಾಗೂ ಸಾಂಪ್ರದಾಯಿಕ ಸೌಂದರ್ಯವನ್ನು ತೋರುವ ಅದ್ಬುತ ಕಲಾಕೃತಿಗಳನ್ನು ಕೆ. ಜ್ಞಾನೇಶ್ವರವರು ರಚಿಸುತ್ತಿದ್ದರು. ಮತ್ತು ಅದೇ ದಾರಿಯಲ್ಲಿ ನಡೆದು ಬಂದರು ಎಂಬುದನ್ನು ಇವರ ಕಲಾಕೃತಿಗಳನ್ನು ವಿಕ್ಷೀಸುವ ಕಲಾಭಿಮಾನಿಗಳಿಗೆ ತಿಳಿಯುತ್ತದೆ.[೧೩]

**ಕಲಾವಿದ ಜ್ಞಾನೇಶ್ವರವರ ಕೌಟುಂಬಿಕ ಜೀವನ**

ಜ್ಞಾನೇಶ್ವರವರು ಗಿರಿಜಾಬಾಯಿ ಎಂಬುವವರನ್ನು ಮದುವೆಯಾದರು ಅದುಕೂಡ ಕಂಪನಿಯೊಂದರಲ್ಲಿ ಕೆಲಸಕ್ಕೆ ಸೇರಿದ ನಂತರವೇ ಗಿರಿಜಾ ಅವರು ಜ್ಞಾನೇಶ್ವರವರಿಗೆ ಜೀವನದಲ್ಲಿ ಕಲಾಸ್ಪೂರ್ತಿಯಾಗಿ ಇದ್ದರು. ಕಲೆಯ ಬಗ್ಗೆಯು ಗಿರಿಜಾ ಅವರಿಗೆ ಅಭಿಮಾನವಿತ್ತು. ಆದ್ದರಿಂದ ತಮ್ಮ ಜೀವನದಲ್ಲಿ ಕಲಾವಿದರಾದ ಜ್ಞಾನೇಶ್ವರವರ ಕೈಹಿಡಿದಿದ್ದು ಅವರ ಅದೃಷ್ಟವೇ ಎಂದು ಭಾವಿಸಿದ್ದರು. ಜ್ಞಾನೇಶ್ವರವರು ಮಾಡುತ್ತಿದ್ದ ಪ್ರತಿ ಕಲಾಕೃತಿಗಳನ್ನು ಮತ್ತು ಅದರ ಮೌಲ್ಯವನ್ನು ಗಿರಿಜಾ ಅವರು ಸಹ ತಿಳಿದುಕೊಂಡಿದ್ದರು. ನಂತರ ಅವರಿಗೆ ಮೂರು ಮಕ್ಕಳಾದವು ಅವರು ಕೆ.ಪ್ರಶಾಂತ್, ಕೆ.ಪ್ರವೀಣ, ಕೆ. ಡಾ.ಪ್ರಸಾದ್, ಇವರಲ್ಲಿ ಕೆ. ಪ್ರಶಾಂತರವರು ಇಂಜಿನಿಯರ್ ಆದರು. ಕೆ. ಪ್ರವೀಣ್ ಅವರು ತಂದೆಯ ಒಂದು ಕಲೆಯನ್ನು ತನ್ನೊಳಗೆ ಗುರುತಿಸಿಕೊಂಡು ಅವರು ಸಹ ಕಲಾವಿದರು ಆದರು. ಕೆ. ಡಾ. ಪ್ರಸಾದ್ ಅವರು ಡಾಕ್ಟರೇಟ್ ಆಗಬೇಕೆಂದು ಆಸೆಪಟ್ಟು ಸಮಾಜದಲ್ಲಿ ಒಬ್ಬ ಜೀವಗಳನ್ನು ಉಳಿಸುವ ಡಾಕ್ಟರೇಟ್‌ರಾಗಿದ್ದಾರೆ. ಈ ರೀತಿಯಾಗಿ ಜ್ಞಾನೇಶ್ವರವರ ಮಕ್ಕಳ ಎಲ್ಲರು ಒಂದು ಒಳ್ಳೆಯ ಕೆಲಸಗಳಲ್ಲಿ ಇದ್ದಾರೆ.

೧೩. ಕಲಾವಿದ ಜ್ಞಾನೇಶ್ವರವರೊಂದಿಗೆ ಸಂದರ್ಶನ

ಅವರಲ್ಲಿ ಜ್ಞಾನೇಶ್ವರವರಂತೆ ಅವರ ಎರಡನೇ ಮಗ ಕೆ.ಪ್ರವೀಣ ಸಮಾಜದಲ್ಲಿ ಕಲಾವಿದರಾಗಿ ಬೆಳೆಯುತ್ತ ಬಂದಿದ್ದರು. ಅದೇ ರೀತಿ ಪ್ರಸ್ತುತ ಈಗಲೂ ಕಲಾಕೃತಿಗಳನ್ನು ಮತ್ತು ಕಲಾಚಟುವಟಿಕೆಯಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡಿದ್ದರೆ, ಅದರಂತೆ ಜ್ಞಾನೇಶ್ವರವರಿಗೆ ಮೊಮ್ಮಕ್ಕಳು ಆಗುವರು. ಅವರು ಅಭಿಷೇಕ್, ಭುವನ್, ಅದ್ವೈತ್. ಈಗ ಜ್ಞಾನೇಶ್ವರವರು ಕಲಾಕೃತಿ ಮಾಡುವಷ್ಟು ಮಾಡಿ ನಂತರದ ಸಮಯದಲ್ಲಿ ಮೊಮ್ಮಕಳ ಜೊತೆ ಕಾಲ ಕಳೆಯುತ್ತಾರೆ. ಈ ರೀತಿಯ ಒಂದು ಕಲಾ ಮತ್ತು ಸುಖ, ಸಂತೋಷ ತುಂಬಿದ ತುಂಬು ಸಂಸಾರದಲ್ಲಿ ಸಂತೋಷದಿಂದ ಕಾಲಕೆಳೆಯುತ್ತೆ ತಾವು ಸಹ ಕಲಾಚಟುವಟಿಕೆಯಲ್ಲಿ ಇರುವುದನ್ನು ಗಮನಿಸಬಹುದು.[೧೨] ಒಂದು ಸಮೃದ್ಧವಾದ ವಾತಾವರಣದಲ್ಲಿ ಜ್ಞಾನೇಶ್ವರವರು ಇರುವುದು ಅವರ ಹೊಸ ಕಲಾಸೃಷ್ಟಿಗೆ ಕಾರಣವಾಗಿದೆ ಎಂದು ಅವರೇ ಹೇಳುತ್ತಾರೆ.

೧೨. ಕಲಾವಿದ ಜ್ಞಾನೇಶ್ವರವರೊಂದಿಗೆ ಸಂದರ್ಶನ


: ಕಲಾವಿದ ಕೆ.ಜ್ಞಾನೇಶ್ವರವರ ವಂಶಾವಳಿ :
ತಂದೆ : ಕೃಷ್ಣರಾವ್
ತಾಯಿ : ಪಾರ್ವತಿ ಬಾಯಿ
ಕೆ. ಕಾಶಿನಾಥ
ರೇಣುಕಾ ಬಾಯಿ
ಕೆ.ಜ್ಞಾನೇಶ್ವರ
ಗಿರಿಜಾ ಬಾಯಿ
ಮುಕ್ತ ಬಾಯಿ
ಲಕ್ಷ್ಮೀಕಾಂತ
ಕೆ. ನಾರಾಯಣ
ಉಷಾಬಾಯಿ
ಕೆ. ಚಂದ್ರಕಾಂತ
ಸುಮಾಬಾಯಿ
ರೇಣುಕಾ ಬಾಯಿ
ಶ್ರೀಧರ
ಮಕ್ಕಳು
ಜಿ. ಪ್ರಶಾಂತ್
ರೂಪಾ
ಜಿ. ಪ್ರವೀಣ
ಸೌಮ್ಯ
ಜಿ. ಪ್ರಸಾದ
ನಿವೇದಿತಾ
ಮೊಮ್ಮಕ್ಕಳು
ಅಭಿಷೇಕ್
ಅಪೇಕ್ಷಾ
ಅನೀಕೆತ
ಭುವನ
ಗಗನ
ಆದಿತ್ಯ

# ಕಲಾಕೃತಿಗಳ ವರ್ಗೀಕರಣ

**ರೇಖಾಚಿತ್ರಗಳು**
- ಪೆನ್ಸಲ್ ಮಾಧ್ಯಮ
- ಚಾರಕೋಲ್ ಮಾಧ್ಯಮ
- ಡ್ರೈಪೇಸ್ಟಲ್ ಮಾಧ್ಯಮ

**ವರ್ಣ ಚಿತ್ರಗಳು**
- ಜಲವರ್ಣ
- ಅಕ್ರಿಲಿಕ್
- ಪೋಸ್ಟರ್ ವರ್ಣ
- ಪೇಸ್ಟಲ್ ವರ್ಣ
- ತೈಲವರ್ಣ
- ಬ್ಲೋ ಟಾರ್ಚ
- ಗಾಜಿನಮಾಧ್ಯಮ
- ಮಿಶ್ರ ಮಾಧ್ಯಮ
- ಭತ್ತಿ ಚಿ ಮತ್ತು ಶಿಲ್ಪ
- ಟೇಪರ್ ವರ್ಣ
- ಚಿಕಣಿ ಚಿತ್ರ

**ಶಿಲ್ಪ ಕಲಾಕೃತತಿಗಳು**
- ಪ್ಲಾಸ್ಟರ ಮಧ್ಯಮ
- ಕಲ್ಲಿನ ಮಾಧ್ಯಮ
- ಸಿಮೆಂಟ ಮಾಧ್ಯಮ
- ಕಂಚು ಮಾಧ್ಯಮ
- ಮಣ್ಣಿನ ಮಾಧ್ಯಮ
- ಕಾಷ್ಠ ಮಾಧ್ಯಮ
- ಟೇರಾ ಕೋಟ

ಅಧ್ಯಾಯ ಮೂರು

# ಕೆ. ಜ್ಞಾನೇಶ್ವರ ಅವರ ಕಲಾಕೃತಿಗಳು

೧. ರೇಖಾ ಚಿತ್ರಗಳು

೨. ವರ್ಣ ಚಿತ್ರಗಳು

೩. ಶಿಲ್ಪಕಲಾ ಕೃತಿಗಳು

# ಕೆ. ಜ್ಞಾನೇಶ್ವರ ಅವರ ಕಲಾಕೃತಿಗಳು

## ೧. ರೇಖಾ ಚಿತ್ರಗಳು: ಚಾರಿತ್ರಿಕ ಹಿನ್ನೆಲೆ

ಚಿತ್ರಕಲೆಯ ಇತಿಹಾಸ ಆರಂಭವಾಗುವುದೇ ರೇಖಾಚಿತ್ರಗಳಿಂದ. ದಕ್ಷಿಣ ಫ್ರಾನ್ಸ್ ಹಾಗೂ ಸ್ಪೇನ್‌ಗಳಲ್ಲಿ ಹಬ್ಬಿರುವ ಕಾಂಟಿಬ್ರಿಯನ್ ಪರ್ವತ ಶ್ರೇಣಿಗಳಲ್ಲಿ ಪೂರ್ವ ಪ್ಯಾಬಿಯೋಲಿಥಿಕ್ ಕಾಲದ ಆದಿಮ ಭೇಟೆಗಾರರು ಗುಹೆಗಳ ಭಿತ್ತಿಯಲ್ಲಿ ರಚಿಸಿದ ಚಿತ್ರಗಳಲ್ಲಿ ರೇಖಾಚಿತ್ರದ ಅಂಶಗಳಿದ್ದು ಇವುಗಳೇ ಪ್ರಪಂಚದ ಆದಿಮ ರೇಖಾಚಿತ್ರಗಳೆಂದು ಗುರುತಿಸಿದ್ದಾರೆ[೧] ಎಂದು ಅ.ಲ. ನರಸಿಂಹನ್ ತಮ್ಮ ಲೇಖನದಲ್ಲಿ ಪ್ರಸ್ತಾಪಿಸುತ್ತಾರೆ. ರೇಖೆ ಇಂದು ನಿನ್ನೆ ಹುಟ್ಟಿಕೊಂಡಿದ್ದಲ್ಲ. ಮಂಗನಿಂದ ಮಾನವ ರೂಪುಗೊಂಡಾಗಲೆ ರೇಖೆಗಳ ಮೂಲಕ ತನ್ನ ಮಾತುಗಳಿಗೆ ಭ್ರಮಾತ್ಮಕ ರೂಪಗಳನ್ನು ನೀಡತೊಡಗಿದರು. ಅದರ ಪರಿಣಾಮವಾಗಿ ಶಿಲಾಯುಗದಲ್ಲಿ ಆದಿಯಲ್ಲಿಯೆ ಗುಹಾಶ್ರಮದಲ್ಲಿ ರೇಖಾಚಿತ್ರಗಳು ಆದಿಮಾನವರಿಂದ ರಚಿತಗೊಂಡವು. ಅವು ಕ್ರಮೇಣ ಅವರ ಅಭಿವ್ಯಕ್ತಿಯ ತುಡಿತಗಳಾಗಿ ಬೆಳಕಿಗೆ ಬಂದವು. ಅವುಗಳಲ್ಲಿ ಮನುಷ್ಯನ ಅಭಿವ್ಯಕ್ತಿಯ ಸಾಧ್ಯಾ-ಸಾಧ್ಯತೆಗಳನ್ನು ಮೊದಲಿಗೆ ಕಂಡುಕೊಂಡಿರುವುದೆ ಪ್ರಾಗೈತಿಹಾಸಿಕ ರೇಖಾಚಿತ್ರಗಳಿಂದ ರೇಖೆ ಮಾನವ ಇತಿಹಾಸದಷ್ಟೇ ಪ್ರಾಚೀನವಾದುದು. 'ಗೆರೆ ರೇಖೆಹಕ್ಕು' ಎಂದಿದ್ದಾನೆ. ಮಂಗರಾಜ ತನ್ನ ನಿಘಂಟಿನಲ್ಲಿ ಸಂಸ್ಕೃತದ ರೇಖೆ ಕನ್ನಡದಲ್ಲಿ ಗೆರೆ ಅಥವಾ ಗೀಟು, ಇಂಗ್ಲಿಷನಲ್ಲಿ Drawing ಈ ಪದವನ್ನು ಚಿತ್ರವೆ ಅಲ್ಲದೆ ಬೇರೆ ಬೇರೆ ಸಂದರ್ಭದಲ್ಲಿ ವಿವಿಧ ಅರ್ಥದಲ್ಲಿ ಉಪಯೋಗಿಸಲಾಗಿದೆ. ಅಪ್ಪ ಹಾಕಿದ ಗೆರೆ ದಾಡುವದಿಲ್ಲ ಎಂಬ ಗಾದೆ ಇಲ್ಲವೇ? ಹಾಗೆಯೇ ಲಕ್ಷ್ಮಣ ರೇಖೆ, ಅದೃಷ್ಟ ರೇಖೆ ಎಂಬ ಪದಗಳನ್ನು ಕೇಳಿದ್ದೇವೆ. ಹೀಗೆ ರೇಖೆ ನಮ್ಮ ಜೀವನದ ಅನೇಕ ಸಂದರ್ಭಗಳಲ್ಲಿ ಹಾಸುಹೊಕ್ಕಾಗಿವೆ.[೨]

ಭಾರತದಲ್ಲಿಯೂ ಚಿತ್ರಕಲೆಯಲ್ಲಿ ರೇಖೆಗೆ ಪ್ರಥಮ ಸ್ಥಾನವಿದೆ. ಶಿಲ್ಪ ಶಾಸ್ತ್ರದಲ್ಲಿ 'ರೇಖಾಂ ಪ್ರಶಂ ಸತಾಚಾರ್ಯ' ಎಂದು ಹೇಳಲಾಗಿದೆ. ವಿಷ್ಣುಧರ್ಮೋತ್ತರ ಪುರಾಣದಲ್ಲಿ ಪೂರ್ವಚಾರ್ಯರು

೧. ರೇಖಾಚಿತ್ರ. ಜಿ.ಪಿ.ಕೆ ಶಾಸ್ತ್ರೀ (ಸಂ) ಪುಟ V
೨. ರೇಖಾಚಿತ್ರ ಜಿ.ಪಿ.ಕೆ. ಶಾಸ್ತ್ರೀ (ಸಂ) ಪುಟ V

ರೇಖೆಯ ಸಮಚಿಂತನೆಯನ್ನು ಶ್ಲಾಘಿಸುತ್ತಾರೆ ಎಂದು ಹೇಳಲಾಗಿದೆ. ಅಭಿಲಷಿತಾರ್ಥ ಗ್ರಂಥ ಚಿಂತಾಮಣಿಯಲ್ಲಿ ಭಿತ್ತಿಯ ಸಿದ್ಧತೆಯ ನಂತರ ಮೊದಲಿಗೆ ಹಾಕುವ ಕರಡು ನಕ್ಷೆಯನ್ನು 'ಆಕಾರ ಮಾತೃಕಾಲೇಖ' ಎಂದೂ ಬಣ್ಣಗಳನ್ನು ತುಂಬಿದ ಮೇಲೆ ಅಂತಿಮವಾಗಿ ಹಾಕುವ ರೇಖೆಗಳನ್ನು 'ಆಕಾರ ಜಾನಿಕಾ ಲೇಖಾ' ಎಂದು ಕರೆದಿದೆ. ಅಂತಿಮ ರೇಖೆಯನ್ನು ಅರಗಿನ ಬಣ್ಣದಿಂದ ಹಾಕುತ್ತಿದ್ದರು. ಕಾವ್ಯಗಳಲ್ಲಿ 'ಲಾಕ್ಷಾರಸ ರೇಖಾ ಶುದ್ಧಿ' ಎಂದು ಇದನ್ನು ಕರೆದಿದೆ[೧] ಎಂದು ಮಾ.ಮಂಜುಳ ಅಭಿಪ್ರಾಯಿಸುತ್ತಾರೆ. ರೇಖಾಚಿತ್ರ ಬಿ.ವಿ.ಕೆ. ಶಾಸ್ತ್ರಿ ಪುಸ್ತಕದ ಮುನ್ನುಡಿಗಳ ನುಡಿಗಳಲ್ಲಿ ತಿಳಿಸಿದ್ದಾರೆ.

ರೇಖಾಚಿತ್ರಕಲೆಯನ್ನು ಒಂದು ಸ್ವಯಂಪೂರ್ಣ ಕಲೆಯೆಂದು ಭಾವಿಸುವ ಪರಿಕಲ್ಪನೆ ಇತ್ತೀಚಿನದು. ಆಧುನಿಕ ಎನ್ನಬಹುದಾದದ್ದು. ಏಕೆಂದರೆ ಪ್ರಾಚೀನ ಕಾಲದಲ್ಲಿ ವರ್ಣಚಿತ್ರಕಲೆಗಿಂತ ಅದು ಭಿನ್ನ ಎಂದು ಭಾವಿಸಿರಲಿಲ್ಲ. ಭಾರತದಲ್ಲಿ ಶಿಲ್ಪವರ್ಣಚಿತ್ರ ಬೇರೆ ಬೇರೆಯಾಗಿರಲಿಲ್ಲ. ಚಿತ್ರ ಎಂದಾಗ ಅದೊಂದು ಸಮಗ್ರ ರಚನೆ ಎಂಬತಿತ್ತು. ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಲ್ಲೂ ಒಂದೆ ಶಬ್ದರೇಖಾಚಿತ್ರ, ವರ್ಣಚಿತ್ರ ಎರಡನ್ನೂ ಸೂಚಿಸುತಿತ್ತು. ಅಲ್ಲದೆ ಕ್ರಿ.ಪೂ.೫ನೇ ಶತಮಾನದವರೆಗೆ ವರ್ಣಚಿತ್ರ ರಚನೆಯ ಪ್ರಧಾನ ಲಕ್ಷಣಗಳಾದ ನೆರಳು-ಬೆಳಕು ಅಳೆದ ಭ್ರಮೆ ಮೂಡಿಸುವ ಮೂರು ಆಯಾಮಗಳ ಕಲ್ಪನೆಯೂ ಇರಲಿಲ್ಲ. ಏಕವರ್ಣ ಅಥವಾ ಬಹುವರ್ಣ ರೇಖಾಚಿತ್ರಗಳೆ ಇದ್ದುದು, ಹಾಗೆ ಚೈನಾದಲ್ಲಿ ಸಹ[೨] ಎಂದು ಎಂ.ಎಚ್.ಕೃಷ್ಣಯ್ಯ ಲೇಖನವೊಂದರಲ್ಲಿ ಅಭಿಪ್ರಾಯಪಡುತ್ತಾರೆ. ಇಂಗ್ಲೆಂಡನಲ್ಲಿ ೧೭೧೫ರಲ್ಲಿ ಜೋನಾಥನ್ ರಿಚರ್ಡ್ಸನ್ ಎಂಬಾತ ರೇಖಾಚಿತ್ರದ ಮಹತ್ವವನ್ನು ಕುರಿತು ತನ್ನ ಸಿದ್ಧಾಂತವನ್ನು ಮಂಡಿಸಿದ. 'ಕಲಾವಿದ ತನ್ನ ಆಲೋಚನೆಗಳನ್ನು ಮನಸ್ಸಿನಲ್ಲಿ ಮೂಡಿದ ಬಿಂಬಗಳನ್ನು ಪೂರ್ಣಪ್ರಮಾಣದ ಮೂಲ ಕಲ್ಪನೆಗಳನ್ನು ಕೈಗಳ ಮೂಲಕ ಮೊಟ್ಟ ಮೊದಲಿಗೆ ರೂಪಿಸುವುದು ರೇಖಾಚಿತ್ರದ ಮೂಲಕವೇ ಆಗಿದ್ದು ಅದೇ ಚಿತ್ರಕಲೆಯ ಬಂಡವಾಳವೂ ಆಗಿರುತ್ತದೆ ಎಂದು ಜೋನಾಥನ್ ಹೇಳಿದ. ಕಲಾವಿದನ ಪ್ರಥಮ ಕಲ್ಪನೆಗಳು ಸೃಜನಾತ್ಮಕ ಆವಿಷ್ಕಾರಗಳ ಮೂಲಗಳು ಶೈಲಿಯ ಬುನಾದಿಗಳು ಹಾಗೂ ಆತನ ಸತ್ಯವಾದ ಆಲೋಚನೆಯ ತತ್ವಗಳು ರೇಖಾಚಿತ್ರಗಳಲ್ಲಿ ಕಂಡುಬರುತ್ತದೆ' ಎಂದು ಕ್ಯಾಂಟೋನಿಯೋ ಜೋಸೆಫ್ ೧೭೪೫ರಲ್ಲಿ ತನ್ನ ಸಿದ್ಧಾಂತವನ್ನು ಮಂಡಿಸಿದೆ.[೩] ಈ ಸಿದ್ಧಾಂತವನ್ನು ಮಂಡಿಸುವುದಕ್ಕೂ ಮೊದಲು ಕಾಗದದ ಮೇಲಿನ ರೇಖಾ ಚಿತ್ರದ ಪ್ರಯೋಗ ೧೩೫೨ರಲ್ಲಿ ಟೋಮಸೋ-ಡ-ಮಾದೆನಾ ಎಂಬಾತ ರಚಿಸಿದ ಪಾರ್ಚ್‌ಮೆಂಟ್ ಕಾಗದದ ಮೇಲಿನ ಆ ಚಿತ್ರವೆ ಮೊದಲೆಂದು ರೇಖಾಚಿತ್ರವಾಗಿದೆ. ನಂತರ ದೊರೆಯುವುದು ಹದಿನೈದನೆಯ ಶತಕದ ಆರಂಭದಲ್ಲಿನ ಎರಡನೆ ಅಲೆಕ್ಸಾಂಡರನ ಕಥೆಯಿರುವ ಕಾಗದದ ಮೇಲಿನ ಚಿತ್ರವಾಗಿದ್ದು, ಈಗ ನ್ಯೂಯಾರ್ಕಿನ ಸಂಗ್ರಹಾಲಯ ದಲ್ಲಿದೆ. ಮುಂದಿನ ಪುನರುತ್ಥಾನ ಕಾಲದಲ್ಲಿ ಪಾರ್ಚ್‌ಮೆಂಟ್ ಕಾಗದದ ಬಳಕೆ ಹೆಚ್ಚಿಗೆ ಆಯಿತು.

೧. ರೇಖಾಚಿತ್ರ ಬಿ.ವಿ.ಕೆ. ಶಾಸ್ತ್ರೀ (ಸಂ) ಪುಟ ೨೭
೨. ರೇಖಾಚಿತ್ರ ಬಿ.ವಿ.ಕೆ. ಶಾಸ್ತ್ರೀ (ಸಂ) ಪುಟ ೧೦
೩. ರೇಖಾಚಿತ್ರ ಬಿ.ವಿ.ಕೆ. ಶಾಸ್ತ್ರೀ (ಸಂ) ಪುಟ ೨೭

ಇದರೊಂದಿಗೆ ಹದಿನಾಲ್ಕನೆ ಶತಮಾನದಲ್ಲಿ ರೇಖಾಚಿತ್ರಗಳ ಸ್ಥಾನಮಾನಗಳ ಬಗ್ಗೆ ವಿಪುಲವಾದ ಚರ್ಚೆ ಬೆಳೆಯಿತು. ರೇಖಾಚಿತ್ರಗಳು ಒಂದು ಕಲಾಕೃತಿಯೆಂದು ಗಂಭೀರವಾಗಿ ಪರಿಗಣಿಸುವಂತೆ ಪರ ಹಾಗೂ ವಿರೋಧಗಳು ಬಂದವು. ಬಹುವರ್ಣದ ಚಿತ್ರಗಳಂತೆ ರೇಖಾಚಿತ್ರಗಳಲ್ಲೂ ಸಂಯೋಜನಾ ತತ್ವ ಹಾಗೂ ನೆರಳು–ಬೆಳಕುಗಳು ಮುಖ್ಯ ಎಂದು ಪರಿಗಣಿಸಲಾಯಿತಲ್ಲದೆ. ವರ್ಣಚಿತ್ರ ಅಥವಾ ಶಿಲ್ಪಿಗಳಿಗೆ ರೇಖಾಚಿತ್ರಗಳು ಮೂಲ ಮಾತೃಕೆ ಮಾತ್ರ ಎಂಬ ಅಭಿಪ್ರಾಯನ್ನು ಬದಲಾಯಿಸಿತು.[೬] ಎಂದಿಗೂ ನಮ್ಮ ಸಾಂಪ್ರದಾಯಿಕ ಬದುಕಿನಲ್ಲಿ ರೇಖೆಗಳಿಗೆ ಆಧ್ಯಾತ್ಮಿಕ ಸ್ಥಾನವನ್ನು ನಮ್ಮ ಪೂರ್ವಜರು ನೀಡಿದ್ದಾರೆ. ಪೂಜೆ, ಜೋತಿಷ್ಯಗಳಲ್ಲಿ ಮಾಟ ಮಂತ್ರಾದಿಗಳಿಗೆ ಮದುವೆಯ ಸಂಭ್ರಮದಲ್ಲಿ ಸುರಿಗೆಶಾಸ್ತ್ರ ಹಾಕುವ ನಕ್ಷೆಗಳು ಹಾಗೂ ರೇಖೆಗಳಿಂದ ಹಾಕಿದ ಮಂಡಲಗಳು, ಮನೋ ಒಳಿತಿಗಾಗಿ ಎಂದು ನಂಬಿದ್ದಾರೆ. ವಿವಿಧೊದ್ದೇಶಗಳಿಗೆ ಬಳಸಲ್ಪಡುವ ರೇಖೆ ನಮ್ಮ ನಿತ್ಯದ ಬದುಕಿನ ಅವಿಭಾಜ್ಯ ಅಂಗವಾಗಿ ಅಕ್ಷರ ರೂಪದಲ್ಲಿ ಪ್ರಾರಂಭವಾಗುವ ರೇಖೆಯ ಕ್ರಿಯೆ ವಿವಿಧ ಕ್ರಿಯೆಗಳಿಗೆ ತನ್ನ ಹರವನ್ನು ವಿಸ್ತರಿಸಿಕೊಳ್ಳುತ್ತದೆ. ಹೀಗೆ ಪ್ರಾಚೀನ ಕಾಲದಲ್ಲಿ ರೇಖಾಚಿತ್ರ ಸಾಂಸ್ಕೃತಿಕವಾಗಿ, ಆಧ್ಯಾತ್ಮಿಕವಾಗಿ ಬೆಳೆದು ಇಂದಿನ ಆಧುನೀಕ ಸಂದರ್ಭದಲ್ಲಿ ಪ್ರತ್ಯೇಕ ಕಲಾ ಪ್ರಕಾರವಾಗಿ ಬೆಳೆದುಬಂದಿದೆ.

### ರೇಖೆ

ಕಲಾವಿದನೊಬ್ಬನನ್ನು ಕಲಾ ಕೌಶಲ್ಯವನ್ನು ನಿಜಕ್ಕೂ ಬಯಲು ಮಾಡುವುದು ರೇಖಾಚಿತ್ರಗಳೆ ಅವನ ಸಹಿ ಇದ್ದಂತೆ ಎನ್ನುವ ಮಾತುಂಟು. ವ್ಯಕ್ತಿಯೊಬ್ಬನ ಕೈ ಬರವಣಿಗೆಯಂತೆಯೆ ರೇಖಾಚಿತ್ರವೊಂದು ಕಲಾವಿದನ ಆ ಸಂದರ್ಭದ ಚಿಂತನೆ ಮತ್ತು ಮನಃಸ್ಥಿತಿಗಳನ್ನು ಪ್ರತಿಬಿಂಬಿಸುತ್ತದೆ.[೭]

ಒಬ್ಬ ಚಿತ್ರಕಾರನ ಚಿತ್ರ ಕಲಿಕೆ ಆರಂಭವಾಗುವುದೇ ರೇಖೆಗಳಿಂದ ಕಲಿಕೆಯ ಆರಂಭದಲ್ಲಿಯೇ ಅವನ ಕಲೆಯ ಪ್ರತಿಭೆಯ ಆಳವನ್ನು ರೇಖೆಗಳಿಂದ ಗುರುತಿಸಬಹುದಲ್ಲಿದೆ. ಆಂತರಿಕ ತುಡಿತಗಳನ್ನು ಕೂಡ ಗ್ರಹಿಸಲು ರೇಖೆ ಪ್ರಮುಖ ಮಾನದಂಡವಾಗುತ್ತದೆ. ರೇಖೆಯಿಲ್ಲದೆ ಚಿತ್ರ ಪೂರ್ಣ ಗೊಳ್ಳುವುದಿಲ್ಲ. ರೇಖೆಗಳ ಚಾರಿತ್ರ್ಯವೇ ಒಂದು ಪರಿಪೂರ್ಣ ಚಿತ್ರಕ್ಕೆ ಜೀವ ತುಂಬಬಹುದು. ಈ ಜೀವತುಂಬುವ ಕಲಾವಿದನಿಗೆ ಪ್ರಾಥಮಿಕವಾಗಿ ರೇಖೆಗಳ ಜ್ಞಾನವಿಲ್ಲದ್ದಿರೆ ಕಲೆಯಲ್ಲಿ ಅವನೊಬ್ಬ ಅಜ್ಞಾನಿಯೇ ಎಂದು ಹೇಳಬಹುದು. ಆಕ್ಸ್‌ಫರ್ಡ್ ಯುನಿವರ್ಸಲ್ ಡಿಕ್ಷನರಿಯ ಪ್ರಕಾರ ರೇಖಾಚಿತ್ರಗಳೆಂದರೆ ಲೇಖನಿ, ಪೆನ್ಸಿಲ್ ಅಥವಾ ಕ್ರಯಾನ್ಸ್‌ನಿಂದ ರೂಪಿಸುವುದು ಎಂದು ಹೇಳುತ್ತಾ 'ವರ್ಣಚಿತ್ರಣದಿಂದ ಭಿನ್ನವಾದ ರೀತಿಯಲ್ಲಿ ರೂಪಣೆ' ಎನ್ನುತ್ತಾರೆ.[೮]

ರೇಖೆ ಒಂದು ಕಲ್ಪನಾ ವಸ್ತು ಎಂದು ಭಾವಿಸಿದರೂ ಅದನ್ನು ಮಾಧ್ಯಮವೆಂದು ತೆಗೆದುಕೊಂಡಾಗ ಅದಕ್ಕೆ ಒಂದು ವಿಶೇಷ ಚೈತನ್ಯ ಇರುವ ಸಂಗತಿ ಅನುಭವವಾಗುತ್ತದೆ.

೬. ರೇಖಾಚಿತ್ರ ಬಿ.ವಿ.ಕೆ. ಶಾಸ್ತ್ರೀ (ಸಂ) ಪುಟ ೨೬
೭. ಚಿ.ಸಂ. ಕೃಷ್ಣಶೆಟ್ಟಿ, ಚಿತ್ರಚಿತ್ತ, ಪುಟ ೯೯
೮. ಚಿ.ಸಂ. ಕೃಷ್ಣಶೆಟ್ಟಿ, ಚಿತ್ರಚಿತ್ತ, ಪುಟ ೯೯

ರೇಖೆಯ ನಾನಾ ರೀತಿಯ ಉಪಯೋಗದಿಂದ ವಿಧದ ಭ್ರಮೆ ಉಂಟು ಮಾಡಬಹುದು. ಬೇರೆ ರೀತಿಯ ಕಲ್ಪನೆ ಮೂಡಿಸಬಹುದು.[೯]

ಸೂಕ್ಷ್ಮವಾಗಿ ಪರಿಶೀಲಿಸಿದರೆ ನಿಸರ್ಗದಲ್ಲಿ ರೇಖೆ ಎಂಬ ಪದಾರ್ಥವೆ ಇಲ್ಲ. ಅದು ಒಂದು ಕಲ್ಪನೆ. ವಸ್ತು ಒಂದು ಮುಗಿಯುತ್ತದೆ, ಇನ್ನೊಂದು ಪ್ರಾರಂಭವಾಗುತ್ತದೆ. ಒಂದೊಂದಕ್ಕೂ ಎಲ್ಲೆಯಾಗೆ ಯಾವ ರೇಖೆಯೂ ಇಲ್ಲ. ಆದರೆ ಚಿತ್ರಕಾರನು ಈ ವಿಷಯವನ್ನು ರೇಖೆಯ ಮೂಲಕ ತಿಳಿಯಪಡಿಸುತ್ತಾನೆ. ಒಂದೊಂದೇ ವಸ್ತುವಿಗೆ ಕೊನೆ ಎಂಬ ಭ್ರಮೆಯುಂಟು ಮಾಡುತ್ತಾನೆ. ಅವುಗಳ ವಿವರಗಳನ್ನು, ವಿವಿಧ ಅಂಶಗಳನ್ನು ಸಾಂಕೇತಿಕವಾಗಿಯಾದರೂ ಚಿತ್ರಿಸಿ ನಿಜಸ್ಥಿತಿಯ ಕಲ್ಪನೆಯುಂಟು ಮಾಡಲು ಯತ್ನಿಸುತ್ತಾನೆ.[೧೦] ಭ್ರಮಾತ್ಮಕ ಮತ್ತು ಕಲ್ಪನಾತ್ಮಕತೆಯನ್ನು ಹೊರಸೂಸುವ ರೇಖೆಯನ್ನು ನಮ್ಮ ಆ ದಿನ ಮತ್ತು ಇಂದಿನ ಚಿತ್ರಕಾರರು ಅಷ್ಟೇ ಸಮರ್ಥವಾಗಿ ತಮ್ಮ ಕಲಾಕೃತಿಗಳಲ್ಲಿ ಮೂಡಿಸಿಕೊಂಡು ಬಂದಿದ್ದಾರೆ. ಸೃಜನಾತ್ಮಕ ಚಿತ್ರಗಳಲ್ಲಿ ಕಲ್ಪನೆಗೆ ಮಹತ್ವದ ಸ್ಥಾನವಿದೆ. ಕಲ್ಪನೆಯು ರೇಖೆಗಳ ಮೂಲಕ ಚಿತ್ರವನ್ನು ಪ್ರವೇಶಿಸುತ್ತದೆ. ಹೀಗೆ ಪ್ರವೇಶಿಸಿದ ರೇಖೆ ಕಲಾಕೃತಿಯಲ್ಲಿ ತನ್ನ ಅರ್ಥವ್ಯಾಪ್ತಿಯನ್ನು ವಿಸ್ತೃತಗೊಳಿಸಿಕೊಳ್ಳುತ್ತದೆ. ಒಂದು ಚಿತ್ರದ ನಿರ್ಮಿತಿಯ ಪ್ರತಿ ಹಂತದಲ್ಲೂ ರೇಖೆ ತನ್ನ ಪ್ರಾಬಲ್ಯವನ್ನು ಮೆರೆಯುತ್ತದೆ. ಒಂದು ಬಿಂದುವಿನಿಂದ ಪ್ರಾರಂಭವಾದ ರೇಖೆ ತನ್ನ ಅಂತ್ಯವನ್ನು ಇನ್ನೊಂದು ಬಿಂದುವಿನಲ್ಲಿ ಕಾಣುತ್ತದೆ. ಇದು ರೇಖೆಯ ಪ್ರಮುಖ ಗುಣವಾಗಿರುತ್ತದೆ.

ರೇಖೆಯಲ್ಲಿ ಎರಡು ಮುಖ್ಯವಾದ ಪ್ರಕಾರಗಳಿವೆ. ಒಂದು ಸರಳರೇಖೆ ಇನ್ನೊಂದು ವಕ್ರರೇಖೆ. ಈ ಸರಳ ಮತ್ತು ವಕ್ರ ರೇಖೆಯಲ್ಲಿ ಮತ್ತೆ ಹಲವು ವಿಧಗಳಿವೆ. ಲಂಬರೇಖೆ, ಕ್ಷಿತಿಜರೇಖೆ, ಬಾಗುರೇಖೆ, ದಾಟುರೇಖೆ, ಕಂಸರೇಖೆ, ಗೊಂದಲಮಯ ರೇಖೆ, ವಲುರೇಖೆ, ಕಪ್ಪರೇಖೆ, ನಾಜುಕುರೇಖೆ, ಅಂಕುಡೊಂಕೂರೇಖೆ, ತುಂಡುರೇಖೆ, ಗೀಚುರೇಖೆ ಮುಂತಾದವು ಎಂದು ವರ್ಗೀಕರಿಸುತ್ತಾರೆ. ರೇಖೆಗಳಲ್ಲಿನ ಅಭಿವ್ಯಕ್ತಿ. ಸಾಮರ್ಥ್ಯ ಅಪರಿಮಿತವಾದುದು ಎಂದು ಉಲ್ಲೇಖಿಸುತ್ತ ಇದರಲ್ಲಿ ಮುಖ್ಯವಾಗಿ ಐದು ಅಂಶಗಳನ್ನು ಗುರುತಿಸುತ್ತಾರೆ. ಅವು-೦೧, ರೇಖೆಯಭಾಯ-೦೨ ರೇಖೆಯ ದಿಕ್ಕು ೦೩-ರೇಖೆಯ ಗುಣಧರ್ಮ, ೦೪-ರೇಖೆಯನ್ನು ಚಿತ್ರಿಸಿದ ಮಾಧ್ಯಮ, ೦೫-ರೇಖೆಯ ಮೇಲ್ಮೈ, ವಿವಿಧ ಮಾಧ್ಯಮಗಳಲ್ಲಿ ಚಿತ್ರಿಸಿದ ರೇಖೆಗಳು ವಿಭಿನ್ನ ಗುಣಧರ್ಮಗಳನ್ನು ಹೊಂದಿರುತ್ತವೆ. ಅಷ್ಟೇ ಅಲ್ಲ ವಿಭಿನ್ನ ಪರಿಣಾಮಗಳನ್ನು ಹೊದಿರುತ್ತವೆ. ಒಂದು ನೇರ ರೇಖೆ ಹಾಗೂ ಭಾಗಿದ ರೇಖೆ ಅಥವಾ ತೀವ್ರತೆಯಿಂದ ಬರೆದ ರೇಖೆ ಮತ್ತು ಮಂದಗತಿಯಿಂದ ಬರೆದ ರೇಖೆ ಅವುಗಳ ಸಂಯೋಜನೆ ಹಾಗೂ ಉತ್ಪತ್ತಿ ಮಾಡುವ ಭಾವನೆಗಳು ಬೇರೆ ಬೇರೆಯಾಗಿಯೆ ಆಗಿರುತ್ತವೆ. ರೇಖೆಗಳಲ್ಲಿ ಜೀವಶಕ್ತಿ (vitalily) ಚಲನಶೀಲತೆ(mobility) ಭಾವಪ್ರಕಾಶ(expressivene)ಗಳ ಸಂಗಮವನ್ನು ಕಾಣಬಹುದಾಗಿದೆ.[೧೧]

೯. ರೇಖಾಚಿತ್ರ ಜಿ.ಪಿ.ಕೆ. ಶಾಸ್ತ್ರೀ (ಸಂ) ಪುಟ V
೧೦. ರೇಖಾಚಿತ್ರ ಜಿ.ಪಿ.ಕೆ. ಶಾಸ್ತ್ರೀ (ಸಂ) ಪುಟ V
೧೧. ಡಾ॥ ಎಸ್. ಪಾಟೀಲ್, ವರ್ಣ ಸಂಚಯ. ಪುಟ ೧೭-೧೯

ವೈವಿಧ್ಯಮಯ ಗುಣಗಳನ್ನು ಹೊಂದಿದ ರೇಖೆಗಳನ್ನು ಬಳಸುವ ಕಲಾವಿದ ಅವುಗಳ ಮೂಲಕ ತನ್ನ ತುಡಿತಗಳನ್ನು ಅಭಿವ್ಯಕ್ತಿಸುವನು. ಹೀಗೆ ವೈವಿಧ್ಯಮಯ ರೇಖೆಗಳಿಂದ ಅಭಿವ್ಯಕ್ತಿಸಲ್ಪಟ್ಟಿರುವಂತದ್ದು ಕಲಾಕೃತಿ ಆಗಿರುತ್ತದೆ.

ರೇಖೆಯ ಸಮತಲದ ಮೇಲೆ ಮೂರು ಆಯಾಮಗಳ ಸೂಚನೆ ಎಲ್ಲಿದೆಯೋ ರೂಪ ತಳೆಯಬಹುದು. ಲಯಬದ್ಧವಾಗಿ ಹರಿಯುವ ಮೂಲಕ ಅಥವಾ ಒಂಕು ಡೊಂಕಾಗಿ, ವಕ್ರವಾಗಿ ತಡೆ ತಡೆದು ನಿಂತು ಹೋಗಬಹುದು. ದಪ್ಪ, ತಿಳು, ನವಿರಾಗಬಹುದು ಅಥವಾ ಬೆಳಕಿನ ನೆರಳಿನ ಸೂಚನೆಯನ್ನು ನೀಡುವಂತೆ ಕಾಣಿಸಿ ಮರೆಯಾಗಬಹುದು ತುಂಡಾಗಬಹುದು. ಬಣ್ಣಗಳ ತೀಕ್ಷ್ಣತೆಗಳಿಗೆನುಗುಣವಾಗಿ ವರ್ತಿಸಬಹುದು. ಹೀಗಾಗಿ ರೇಖೆಗೆ ಅದರದೇ ಚೈತನ್ಯವಿದೆ. ವೈವಿಧ್ಯಮಯ ವರ್ತನೆಯಿದೆ. ಸ್ವತಂತ್ರ ವ್ಯಕ್ತಿತ್ವವಿದೆ. ಅದು ಸ್ವತಂತ್ರ 'ಕಲೆ'ಯಾಗಿ ಸೌಂದರ್ಯಾತ್ಮಕ ಮೌಲ್ಯವನ್ನು ಒಳಗೊಳ್ಳುತ್ತದೆ.[೧೨] ರೇಖಾ ಚಿತ್ರಕ್ಕೆ ರೇಖೆಯೆ ಜೀವಾಳ ಎಂದಾಯಿತು. ಹೀಗಾಗಿ ಚಿತ್ರರಚನೆಯಲ್ಲಿ ಅದಕ್ಕೊಂದು ಮಹತ್ವವಿದೆ. ಅದು ಕಲಾವಿದನ ಮಾನಸಿಕ ಉದ್ದೇಶವನ್ನು ಅವರ ತೀವ್ರತೆಯೊಂದಿಗೆ ಪರಿಶುದ್ಧ ಸ್ಥಿತಿಯಲ್ಲಿ ವ್ಯಕ್ತ ಪಡಿಸುವುದಷ್ಟೇ ಅಲ್ಲದೆ ಚಿತ್ರಸೃಷ್ಟಿ ಕಾಲದ ಅವನ ಚಿತ್ತವೃತಿಯ ಭಾವನೆಗಳನ್ನು ಆ ಕ್ಷಣಕ್ಕೆ ನಮ್ಮ ಮುಂದೆ ತೆರೆದಿರುತ್ತದೆ[೧೩] ಎಂದು ಎಂ.ಎಚ್. ಕೃಷ್ಣಯ್ಯ ಅಭಿಪ್ರಾಯಪಟ್ಟಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಒಂದು ಘಟನೆ– ಹೆಸರಾಂತ ಪಾಶ್ಚಾತ್ಯ ಕಲಾವಿದ ವ್ಯಾನಗಾಗ್ ರೇಖಾಚಿತ್ರವೊಂದನ್ನು ನೋಡಿದ ಮತ್ತೊಬ್ಬ ಹೆಸರಾಂತ ಕಲಾವಿದ ಪಾಲಗೊಗೈನ್ ನೀನು ತುಂಬ ಕ್ಷಿಪ್ರವಾಗಿ ಬರೆಯುತ್ತಿಯಾ ಎಂದನಂತೆ. ಅದಕ್ಕೆ ವ್ಯಾನಗೊ ಮರುಉತ್ತರ ನೀಡಿದ ನೀನು ಕೂಡಾ ತುಂಬ ಕ್ಷಿಪ್ರವಾಗಿ ನೋಡಿರ್ತಿಯಾ[೧೪] ಈ ಪ್ರತಿಕ್ರಿಯೆಗಳು ರೇಖಾಚಿತ್ರದ ಎರಡು ಸಾಧ್ಯ ಅಸಾಧ್ಯತೆಗಳನ್ನು ನೆನಪಿಸುತ್ತದೆ.

ರೇಖೆಗಳಲ್ಲಿ ಆಂತರಿಕ ಗುಣ ಹಾಗೂ ವ್ಯಕ್ತಿತ್ವ ಅರಿಯದೆ ಹಿಂದಿನ ಶತಮಾನಗಳಲ್ಲಿ ರೇಖಾಚಿತ್ರಕಲೆಯನ್ನು ಸೃಜನಶೀಲ ಅಭಿವ್ಯಕ್ತಿ ಮಾಧ್ಯಮ ಎಂದು ಒಪ್ಪಿಕೊಡಿರಲಿಲ್ಲವೆಂದು ಈ ಹಿಂದೆ ಹೇಳಲಾರದೆ ಶತಮಾನಗಳು ಉರುಳಿದವು ನಂತರ ಆಧುನಿಕ ಕಲಾ ಚಳುವಳಿಗಳು ಪಶ್ಚಿಮದ ದೇಶಗಳಲ್ಲಿ ತೀವ್ರಗೊಂಡಾಗ ರೇಖಾಚಿತ್ರವನ್ನು ಕೂಡಾ ಒಂದು ಪ್ರತ್ಯೇಕ ಅಭಿವ್ಯಕ್ತಿ ಮಾಧ್ಯಮವೆಂದು ಪರಿಗಣಿಸಲಾಯಿತು. ಇದು ಕ್ರಮೇಣ ಪ್ರಬಲ ಮಾಧ್ಯಮವೆಂದು ಗುರುತಿಸಿದಾಗ ಭಾರತದ ಆಧುನಿಕ ಸಂದರ್ಭದಲ್ಲಿ ರೇಖಾಚಿತ್ರದ ಕುರಿತು ಗಂಭೀರ ಚಿಂತನೆಗಳು ನಡೆದು ವಿಕ್ಟೋರಿಯನ್ ಕಲಾಶಾಲೆಗಳು ಹುಟ್ಟಿನೊಂದಿಗೆ ರೇಖಾಚಿತ್ರವು ಕೂಡಾ ಶೈಕ್ಷಣಿಕ ವಲಯದೊಳಗೆ ತನ್ನ ಪ್ರವೇಶವನ್ನು ಖಚಿತಪಡಿಸಿಕೊಂಡಿತು.

ಭಾರತದಲ್ಲಿ ನವ್ಯಕಲೆ ತನ್ನ ಬೇರುಗಳನ್ನು ಗಟ್ಟಿಯಾಗಿಸಿಕೊಂಡಿದ್ದು ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದ ಹೊಸದರಲ್ಲಿಯೇ ೧೯ನೇ ಶತಮಾನದ ಪೂರ್ವಾರ್ಧದಲ್ಲಿ ರೇಖಾಚಿತ್ರಕಲೆ

೧೨. ರೇಖಾಚಿತ್ರ ಜಿ.ಪಿ.ಕೆ. ಶಾಸ್ತ್ರೀ (ಸಂ) ಪುಟ ೧೧
೧೩. ರೇಖಾಚಿತ್ರ ಜಿ.ಪಿ.ಕೆ. ಶಾಸ್ತ್ರೀ (ಸಂ) ಪುಟ ೧೧
೧೪. ಟಿ.ಸಂ. ಕೃಷ್ಣಶೆಟ್ಟಿ, ಚಿತ್ರಚಿತ್ತ, ಪುಟ

ಭಾರತ ಆಧುನಿಕ ಸ್ವರೂಪದಲ್ಲಿ ಕಾಣಿಸಿಕೊಂಡಿತು. ಇಂದು ನಮ್ಮ ನಾಡಿನ ಹೆಸರಾಂತ ಕಲಾವಿದರ ಮೂಲದಲ್ಲಿ ರೇಖಾಚಿತ್ರಗಳನ್ನು ರಚಿಸಿಯೆ ಬೆಳಕಿಗೆ ಬಂದದ್ದು ಅವರಲ್ಲಿ ಕೆ.ಕೆ.ಹೆಬ್ಬಾರ, ಲಕ್ಷ್ಮೀಗೌಡ, ಜೈರಾಮ್ ಪಾಟೀಲ್, ರಾಮಾನುಜಮ್, ಸಲ್ತಾನಅಲಿ, ಆರ್.ಎಸ್.ಭಿಷ್ಪ, ಆದಿ ಮೂಲ ಮೊದಲಾದವರು. ಆಧುನಿಕ ರೂಪ ಪಡೆದ ರೇಖಾಚಿತ್ರಗಳಲ್ಲಿ ಜಾಗತಿಕ ಮನ್ನಣೆಯನ್ನು ಪಡೆದ ಕೆ.ಕೆ.ಹೆಬ್ಬಾರರು ನಮ್ಮ ಕನ್ನಡಿಗರು ಎಂಬುದು ಹೆಮ್ಮೆಯ ವಿಷಯ ನಂತರದಲ್ಲಿ ಬೆಳಕಿಗೆ ಬಂದ ಎಷ್ಟೋ ಕಲಾವಿದರು ರೇಖಾಚಿತ್ರಗಳನ್ನು ರಚಿಸಿದ್ದಾರೆ. ತಮಿಳುನಾಡಿನ ಆದಿಮೂಲದವರು ರೇಖಾಚಿತ್ರಗಳ ಸಂಪುಟ ಇತ್ತೀಚಿಗೆ ಹೊರಬಂದಿದೆ. ರೇಖೆಗಳು ಚಲನಶೀಲತೆಯನ್ನು ಅವುಗಳ ಗುಣ ಮತ್ತು ಲಕ್ಷಣಗಳನ್ನು ಅಧ್ಯಯನ ಮಾಡುವವರಿಗೆ ಈ ಗ್ರಂಥ ಮಹತ್ವ ಪೂರ್ಣವಾದ್ದುದು ಇವರು ಸಮಕಾಲಿನವರಾದ ಕೆ. ಜ್ಞಾನೇಶ್ವರ ಅವರ ರೇಖಾಚಿತ್ರಗಳು ಸಾವಿರಾರು ಸಂಖ್ಯೆಯಲ್ಲಿ ರಚನೆಗೊಂಡಿವೆ. ರಚನೆಗೊಂಡಿರುವ ರೇಖಾ ಚಿತ್ರಗಳಲ್ಲಿ ವೈವಿದ್ಯತೆಯಿಂದ, ವೈದೃಶ್ಯಗಳಿಂದ ಕೂಡಿರುವವು. ಅದರ ವ್ಯವಸ್ಥಿತವಾಗಿ ಗ್ರಂಥ ರೂಪದಲ್ಲಿ ಪ್ರಕಟವಾಗದಿರುವುದು ವಿಷಾದನೀಯ ಸಂಗತಿ. ಪ್ರಸ್ತುತ ಅಧ್ಯಯನದಲ್ಲಿ ಕೆ. ಜ್ಞಾನೇಶ್ವರ ಅವರ ರೇಖಾಚಿತ್ರಗಳ ಅಧ್ಯಯನ ಕೈಗೊಳ್ಳಲಾಗಿದ್ದು ಅವರ ೨೦ ರಿಂದ ೭೫ ವರ್ಷಗಳ ವಿವಿಧ ಕಾಲಾವಧಿಗಳಲ್ಲಿನ ರೇಖಾಚಿತ್ರಗಳನ್ನು ಆಯ್ದುಕೊಂಡು ಅವುಗಳ ಕುರಿತು ಚರ್ಚಿಸಲಾಗಿದೆ.

ಅಂತಃಸ್ಫುರಣ ಮತ್ತು ಬೌದ್ಧಿಕತೆಗಳು ಕೆ. ಜ್ಞಾನೇಶ್ವರ ಅವರ ರೇಖಾಚಿತ್ರಗಳ ಮೌಲಿಕ ತಿರುಳುಗಳು. ತಮ್ಮ ಕಲಾ ಜೀವನದುದ್ದಕ್ಕೂ ಎಡೆಬಿಡದೇ ರಚಿಸಿದ ಚಿತ್ರಗಳು ಸಾವಿರಾರು. ಅವು ಅವರ ಅಂತಃಸ್ಫುರಣದ ಪ್ರತೀಕಗಳಾಗಿವೆ. ಅವರ ಕಲಾ ಸೃಷ್ಟಿಯಲ್ಲಿ ಮೊದಲ ಆಯ್ಕೆ ರೇಖಾಚಿತ್ರಗಳು ದೈನಂದಿನ ಚಿತ್ರಗಳು ಈಗಲೂ ದಿನವೊಂದಕ್ಕೆ ಎಂಟ್ಹತ್ತು ಸೃಷ್ಟಿಯಾಗುತ್ತವೆ. ಇನ್ನು ೨೦ ರಿಂದ ೭೫ ವರ್ಷಗಳಲ್ಲಿ ಗಂಭೀರ ಎನ್ನಬಹುದಾದ ರೇಖಾಚಿತ್ರಗಳು ಸರಣಿ ರೂಪದಲ್ಲಿ ಮೈದಳೆದುರುವುದು ಹಲವಾರು. ಒಂದೊಂದು ಸರಣಿಯಲ್ಲೂ ಏನಿಲ್ಲವೆಂದರೂ ನೂರರಾಚೆಗಿನ ವೈವಿಧ್ಯಮಯ ಅಭಿವ್ಯಕ್ತಿಗಳು. ಒಂದೊಂದು ಚಿತ್ರದಲ್ಲೂ ಶಿವಮೊಗ್ಗೆಯ ದೇವಾಲಯದ ಶಿಲ್ಪದ ಮತ್ತು ಸಮಾಜ ಮುಖಿಯಾಗಿರುವ ಅಂಶಗಳು ಎಡಪಂಥಿಯ ಧೋರಣೆಗಳು ಹೀಗೆ ನಾನಾ ತರಹದ ಹಲವಾರು ರೂಪಗಳು ಜೀವ ಪಡೆದಿವೆ. ಅಪಾರ ವೈವಿಧ್ಯವಿರುವ ಇವರ ಕಲಾಸೃಷ್ಟಿಯಲ್ಲಿ ಒಂದನ್ನೊಂದು ಹೋಲುವತಂಹ ಕೃತಿಗಳು ಇಲ್ಲವೆ ಇಲ್ಲವೆನ್ನುವಷ್ಟು ವಿರಳ. ಎಸ್.ಜಿ. ವಾಸುದೇವ್, ಯೂಸೂಫ್ ಅರಕ್ಕಲ್ ಅವರಂತಹ ಕೆಲವು ಕಲಾವಿದರ ಕೃತಿಗಳು ವಿವರಿಸುವಾಗ ಒಂದು ಕೃತಿಯ ರೂಪ ತಂತ್ರ, ಶೈಲಿಗಳ ಬಗ್ಗೆ ಹೇಳಿದ ಮಾತುಗಳು ಬಹುತೇಕ ಅವರ ಆಸರಣಿಯ ಇತರ ಕೃತಿಗಳಿಗೂ ಅನ್ವಯಿಸಬಹುದು. ಹೀಗೆ ಅವರ ಒಂದೊಂದು ಸರಣಿಗಳಲ್ಲಿ ಅಷ್ಟೇನೂ ಹೆಚ್ಚಿನ ವ್ಯತ್ಯಾಸಗಳು ಕಂಡುಬರುವುದಿಲ್ಲ. ಆದರೆ ಜ್ಞಾನೇಶ್ವರ ಅವರ ಸಂದರ್ಭದಲ್ಲಿ ಈ ಮಾತನ್ನು ಹೇಳಲಾಗುವುದಿಲ್ಲ. ಹೆಚ್ಚಿನ ಸಂದರ್ಭಗಳಲ್ಲಿ ಅವರ ಒಂದು ಕೃತಿಯ ಬಗ್ಗೆ ಹೇಳಿದ ಮಾತುಗಳು ಇನ್ನೊಂದು ಕೃತಿಗೆ ಅನ್ವಯವಾಗದಿರುವಷ್ಟು ಬೇರೆಯದೆನಿಸುತ್ತದೆ.[೧೫] ಕೆ. ಜ್ಞಾನೇಶ್ವರ ಅವರ ರೇಖಾಚಿತ್ರಗಳ

೧೫. ಜಿ. ಸಂ. ಕೃಷ್ಣಶೆಟ್ಟಿ, ಸಂಕುಲ. ಸಂ. ೧೭. ಪುಟ. ೩೭

ಪ್ರಭಾವಗಳು ಅವರ ವರ್ಣಚಿತ್ರಗಳಲ್ಲಿ ಧಾರಾಳವಾಗಿ ಮೂಡಿಬಂದಿವೆ. ಅವರ ಶಿಲ್ಪಕಲಾಕೃತಿಗಳಲ್ಲಿ ಗಾಢವಾದ ರೇಖೆಗಳೆ ರೂಪಗಳನ್ನು ಸ್ಪಷ್ಟಪಡಿಸುತ್ತವೆ. ಇದಕ್ಕೆ ಕಾರಣ ರೇಖೆಗಳು ಕಲಾವಿದನ ಸ್ಮೃತಿಪಟಲದಲ್ಲಿ ಅಚ್ಚಳಿಯದ ಪ್ರಭಾವವನ್ನು ಬೀರಿರುದರಿಂದ ಅವು ಇತರ ಕಲಾಮಾಧ್ಯಮಗಳಲ್ಲಿ ಪ್ರಕೃತಿ ಸಹಜವಾಗಿ ಮೂಡಿಬರುತ್ತವೆ. ಪಿಕಾಸೋವಿನ ಒಂದು ಮಾತು ಪರಿಶೀಲನಾರ್ಹವಾಗುತ್ತದೆ. 'ಒಂದು ಕಲಾಕೃತಿ ತನ್ನ ವರ್ತಮಾನದಲ್ಲಿ ಸಂಪೂರ್ಣವಾಗಿ ಜೀವಿಸದೇ ಅಪ್ರಸ್ತುತ ವಾದಲ್ಲಿ ಅದನ್ನು ಗಮನಿಸಲೇಬಾರದು.'[೧೬] ಈ ಮಾತು ಜ್ಞಾನೇಶ್ವರ ಅವರ ಕಲಾಸೃಷ್ಟಿಗೆ ಅನ್ವಯವಾಗುವುದಿಲ್ಲ. ಜ್ಞಾನೇಶ್ವರ ಅವರು ಆಯಾ ಕಾಲದ ವರ್ತಮಾನ ವಿಚಾರಗಳಿಗೆ ತಕ್ಕಂತೆ ತಮ್ಮ ತುಡಿತಗಳನ್ನು ರೇಖಾವರ್ಣಚಿತ್ರ ಮತ್ತು ಶಿಲ್ಪಕಲಾಕೃತಿ ಇತ್ಯಾದಿ ಮಾಧ್ಯಮದ ಅಭಿವ್ಯಕ್ತಿಸಿದ ಅವರ ರೇಖಾಚಿತ್ರಗಳು ಅಂದಿನ ಬದುಕಿನ ಜೀವಧ್ವನಿಯಾಗಿ ರೂಪುಗೊಂಡವುಗಳಾಗಿವೆ ಎಂಬ ಅಂಶವನ್ನು ತಿಳಿದು ಕೊಳ್ಳಬಹುದು.

ರೇಖಾಚಿತ್ರಗಳ ಕುರಿತು ಜ್ಞಾನೇಶ್ವರ ಅವರು– ಡ್ರಾಯಿಂಗ್ ಎಂದರೆ ಒಬ್ಬ ಕಲಾವಿದನನ್ನು ಅರಿತುಕೊಳ್ಳುವುದು ಅಂದರೆ ಆ ಕಲಾವಿದನ ವಿಚಾರ, ಚಿಂತನೆಯ ರೀತಿ ರೇಖಾಭಿವ್ಯಕ್ತಿ ಹಾಗೂ ರೇಖೆಗಳಲ್ಲಿನ ಹಿಡಿತಗಳನ್ನು ಬೇರೆ ಬೇರೆ ದೃಷ್ಟಿಕೋನದಲ್ಲಿ ನೋಡುವುದು. ಅವರ ಕಲಾಕೃತಿಗೂ ಮತ್ತೊಬ್ಬ ಕಲಾವಿದನ ಕಲಾಕೃತಿಗೂ ಇರುವಂಥ ಹೋಲಿಕೆಗಳನ್ನು ನೋಡುವುದು. ಈ ರೀತಿಯಾಗಿ ಪ್ರಯೋಗಗಳನ್ನು ಮಾಡುವುದರಿಂದ ಮತ್ತೊಬ್ಬ ಕಲಾವಿದನನ್ನು ಅರಿತುಕೊಳ್ಳಲು ಸಾಧ್ಯ. ಹೀಗೆ ಬೇರೆ ಬೇರೆ ಕಲಾವಿದರನ್ನು ಅರಿತುಕೊಳ್ಳುತ್ತದೆ. ನಾವು ಸ್ವತಂತ್ರವಾಗಿ ಆಲೋಚಿಸುವ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತೇವೆ'[೧೭] ಎನ್ನುತ್ತಾರೆ.

ಜ್ಞಾನೇಶ್ವರ ಅವರ ಸ್ವತಂತ್ರ್ಯ ಅಭಿವ್ಯಕ್ತಿ ಸಾಧ್ಯತೆಗಳನ್ನು ಅವರ ಶಿಲ್ಪಗಳಲ್ಲಿ ಇತ್ತೀಚಿಗೆ ರೇಖಾಚಿತ್ರಗಳಲ್ಲಿ ಕಾಣಬಹುದಾಗಿದೆ. ಕೆಲವು ಅಲಂಕಾರಿಕ ಮತ್ತು ವರ್ಣಚಿತ್ರಗಳು, ಸೂಕ್ಷ್ಮರೀತಿಯ ರೇಖಾಚಿತ್ರಗಳು ಈ ರೀತಿಯಾಗಿ ಸಾಕಷ್ಟು ಕಲಾಕೃತಿಗಳನ್ನು ರಚಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅವರ ಆಯ್ದ ರೇಖಾಚಿತ್ರಗಳನ್ನು ರಚಿಸಿದ ಕಾಲದ ಅನುಸಾರವಾಗಿ ವಿಶ್ಲೇಷಣೆ ಮಾಡಲಾಗಿದೆ.

**ರೇಖಾಚಿತ್ರಗಳು**

**೧. ಕೃಷ್ಣನೊಂದಿಗೆ ಸಖಿಯರು**

ಚಿತ್ರದಲ್ಲಿ ಶ್ರೀ ಕೃಷ್ಣನೊಂದಿಗೆ ಹತ್ತು ಸಖಿಯರಿದ್ದು, ಶ್ರೀಕೃಷ್ಣನು ಮಧ್ಯದಲ್ಲಿ ಕುಳಿತಿದ್ದಾನೆ. ಕೃಷ್ಣನ ಸುತ್ತಲೂ ಸಖಿಯರು ವಿವಿಧ ಭಂಗಿಯಲ್ಲಿ ಇರುವುದು ನಾವು ಈ ಚಿತ್ರದಲ್ಲಿ ಕಾಣಬಹುದು. ಒಬ್ಬಳು ತಂಬೂರಿಯನ್ನು ಹಿಡಿದು ಸಂಗೀತವನ್ನು ಹಾಡುತ್ತಿದ್ದಾಳೆ. ಮತ್ತೊಬ್ಬಳು ಕೃಷ್ಣನ ತೊಡೆಯ ಮೇಲೆ ಕುಳಿತಿರುವುದು ಹಾಗೆ ಕೃಷ್ಣನ ಹಿಂಭಾಗದಲ್ಲಿ ಇಬ್ಬರು ಸಖಿಯರು ಚಾಮರವನ್ನು ಬೀಸುತ್ತಿರುವ ದೃಶ್ಯ ಮತ್ತೇ ಇಬ್ಬರು ಕೃಷ್ಣನ ಭುಜದ ಮೇಲೆ ಒರಗಿಕೊಂಡಿದ್ದಾಳೆ. ಈ ಚಿತ್ರವನ್ನು

೧೬. ಕೆ.ವಿ. ಸುಬ್ರಮಣ್ಯಂ, ಕಲಾಸಂವೇದನೆಯ ಒಳನೋಟಗಳು, ಪುಟ–೧೪
೧೭. ಡಾ. ಅ.ಲಿ. ನರಸಿಂಹನ್, ಅಲೇಖ್ಯ, ಪುಟ–೬

ರೇಖಾಚಿತ್ರದ ಸಂಯೋಜನೆಯ ಚಿತ್ರವೆಂದು ಹೇಳಬಹುದು. ಕೃಷ್ಣಯುಗದ ಒಂದು ದೃಶ್ಯವಾಗಿದ್ದು, ಇದನ್ನು ಕೆ. ಜ್ಞಾನೇಶ್ವರ ಅವರು ತುಂಬಾ ಸುಂದರವಾಗಿ ಚಿತ್ರಿಸಿದ್ದಾರೆ. ಹಾಗೂ ಆ ದೃಶ್ಯದಲ್ಲಿ ಪ್ರತಿ ವ್ಯಕ್ತಿಯ ಹಾವಭಾವವನ್ನು ಸೆರೆಹಿಡಿದಿದ್ದಾರೆ. ಕೃಷ್ಣ ಮತ್ತು ಸಖಿಯರು ಕುಳಿತಿರುವ ಭಂಗಿಯಂತೆ ಒಂದಕ್ಕಿಂತ ಒಂದು ಸುಂದರವಾಗಿ ಸಂಯೋಜನೆ ಗೊಂಡಿರುವುದನ್ನು ಕಾಣಬಹುದು. ಇಂತಹ ಒಂದು ರೇಖಾಚಿತ್ರವು ಮುಂದಿನ ಪೀಳಿಗೆಗೆ ಸಾಂಪ್ರದಾಯಿಕ ಕಲೆಯ ಏಳಿಗೆಯನ್ನು ನೆನೆಯಲು ಒಂದು ಸಾಕ್ಷಿಯಾಗುತ್ತದೆ. ಹಾಗೂ ಈ ರೀತಿಯ ರೇಖಾಚಿತ್ರಗಳನ್ನು ತಮ್ಮ ಬದುಕು ಎಂದು ಕಲಿಯುವ ಒಬ್ಬ ಕಲಾವಿದನಲ್ಲಿ ಮಾತ್ರ ಅಡಗಿರುವುದು ಎಂದು ಹೇಳಬಹುದು. ಈ ರೇಖಾಚಿತ್ರದಲ್ಲಿ ವಸ್ತ್ರವಿನ್ಯಾಸವು ವಿಶೇಷವಾಗಿದೆ. ಅವರ ಮುಂದೆ ಫಲಹಾರವನ್ನು ಮತ್ತು ಪಾನೀಯವನ್ನು ಜೋಡಿಸಿ ಇಟ್ಟಿರುವಂತೆ ಕಾಣಬಹುದು. ಒಟ್ಟಾರೆ ಹೇಳಬೇಕೆಂದರೆ ಸಾಂಪ್ರದಾಯಿಕ ಶೈಲಿಯ ರೇಖಾಚಿತ್ರವಾಗಿದ್ದು, ನೋಡಲು ಸುಂದರ ಹಾಗೂ ಸಂಯೋಜನೆ, ವಸ್ತ್ರವಿನ್ಯಾಸ, ರೇಖೆಗಳ ಪ್ರಮಾಣಬದ್ಧತೆ ಎಲ್ಲವೂ ವಿಶೇಷವಾಗಿದೆ ಎಂದು ಹೇಳಬಹುದು.[೧೮]

**೨. ಮತ್ಸದೇವತೆಯ ಚಿತ್ರ**

ವಿಷ್ಣುವಿನ ಒಂದು ಅವತಾರದ ಚಿತ್ರವಾಗಿದ್ದು, ಈ ರೇಖಾಚಿತ್ರವು ಮತ್ಸ ದೇವತೆಯಾಗಿದ್ದು. ದೇವತೆಯ ಬಲಗೈಯಲ್ಲಿ ಚಕ್ರವನ್ನು ಎಡಗೈಯಲ್ಲಿ ಶಂಕುವನ್ನು ಚಿತ್ರಿಸಲಾಗಿದೆ. ಹಾಗೂ ಮತ್ಸದೇವತೆಯ ತಲೆಯ ಮೇಲೆ ಕೀರಿಟವನ್ನು ಧರಿಸುವುದನ್ನು ಕಾಣಬಹುದು. ಕೊರಳಿಗೆ ವಿವಿಧ ಬಗೆಯ ಸರಗಳನ್ನು ಧರಿಸುವುದು ಅರ್ಧಭಾಗ ಮನುಷ್ಯನಾಗಿ ಮತ್ತು ಅರ್ಧಭಾಗವು ಮೀನಿನ ಭಾಗವಾಗಿದೆ. ಆ ಮತ್ಸದೇವತೆಯ ಮುಖವು ದುಂಡಗೆ ಇದ್ದು ಕಣ್ಣುಗಳು ಮೀನಿನ ಆಕಾರದಲ್ಲಿದ್ದು ನಾಲ್ಕು ಕೈಗಳನ್ನು ಹೀಗೆ ವಿಶೇಷ ರೀತಿಯಲ್ಲಿ ಚಿತ್ರಿಸಿದರೆ ಈ ಚಿತ್ರದಲ್ಲಿ ಇನ್ನೊಂದು ವಿಶೇಷವೆನೆಂದರೆ ಆಭರಣಗಳ ವಿನ್ಯಾಸವು ಅದ್ಭುತವಾಗಿ ಮೂಡಿಬಂದಿರುವುದು ಹಾಗೂ ವಸ್ತ್ರವಿನ್ಯಾಸ ದೇವತೆಯ ಭಂಗಿಯು ವಿಶೇಷ ರೀತಿಯಲ್ಲಿದೆ. ಈ ಚಿತ್ರವು ಕೂಡ ಸಾಂಪ್ರದಾಯಿಕ ಶೈಲಿಯ ರೇಖಾಚಿತ್ರವಾಗಿದೆ. ಸರಿಯಾದ ಪ್ರಮಾಣವನ್ನು ಬಳಸಿಕೊಂಡು ರೇಖಾಚಿತ್ರವನ್ನು ಕಪ್ಪು ಮಸಿಯಿಂದ ಚಿತ್ರಿಸಲಾಗಿದ್ದು ಜೊತೆಗೆ ಸಲ್ಪ ಪ್ರಮಾಣದಲ್ಲಿ ಕೆಂಪು ಬಣ್ಣವನ್ನು ಬಳಸಿಕೊಂಡು ರೇಖಾಚಿತ್ರವನ್ನು ಪೂರ್ಣಗೊಳಿಸಿರುವುದು ಕಾಣಬಹುದು. ಇದು ಒಂದು ದೇವತೆಯ ರೇಖಾಚಿತ್ರ ಅದರಲ್ಲೂ ವಿಶೇಷವೆಂದರೆ ಮತ್ಸದೇವತೆ ಎಂಬುದು ಸ್ಪಷ್ಟವಾಗಿ ಮುಖ ಭಾವ ಲಾಲ್ಯಿತೆಯಿಂದ ಕೂಡಿದ ಮೈಕಟ್ಟು ಆಕರ್ಷಕವಾದ ಮೈವಳಿಕೆ ವಿಶೇಷವೆನಿಸುವಂತೆ ಚಿತ್ರ ಸಂಯೋಜನೆಯನ್ನು ಉತ್ತಮ ರೀತಿಯಲ್ಲಿ ಮಾಡಲಾಗಿದೆ.

**೩. ನರಸಿಂಹ ಹಿರಣ್ಯಕಶಪನನ್ನು ಸಂಹರಿಸುವ ದೃಶ್ಯ**

ಕೆ. ಜ್ಞಾನೇಶ್ವರ ಅವರು ಈ ರೇಖಾಚಿತ್ರದಲ್ಲಿ ನರಸಿಂಹನು ತನ್ನ ತೊಡೆಯ ಮೇಲೆ ಹಿರಣ್ಯಕಶ್ಯಪರನ್ನು ಮಲಗಿಸಿಕೊಂಡು ಹೊಟ್ಟೆಯನ್ನು ಸೀಳಿ ಕರುಳನ್ನು ತೆಗೆದು ತನ್ನ ಕೊರಳಿಗೆ

೧೮. ಜಿ.ಸಂ. ಕೃಷ್ಣಶೆಟ್ಟಿ, ಚಿತ್ರಚಿತ್ತ, ಪುಟ ೫೭–೫೮

ಹಾಕಿಕೊಂಡಿರುವುದು ಮತ್ತು ನರಸಿಂಹನ ಬಲಗಾಲಿನ ಹತ್ತಿರ ಭಕ್ತನಾದ ಹಿರಣ್ಯಾಕೇಶಪೂವಿನ ಮಗನಾದ ಪ್ರಹ್ಲಾದನು ನರಸಿಂಹನನ್ನು ಸಮಾಧಾನಪಡಿಸುತ್ತಿರುವುದು ಮತ್ತು ನರಸಿಂಹನ ಮುಖದಲ್ಲಿ ಕೋಪ ಹಾಗೂ ರೋಷದ ಭಾವನೆಗಳನ್ನು ಜ್ಞಾನೇಶ್ವರ ಅವರು ತಮ್ಮ ಚಿತ್ರದಲ್ಲಿ ತೋರಿಸಿದ್ದಾರೆ. ಆವೇಷದಲ್ಲಿ ನರಸಿಂಹನನ್ನು ಕೆಣುಕಿದ ಹಿರಣ್ಯಕಶಪನು ನರಳುತ್ತಿರುವುದನ್ನು ತುಂಬಾ ಅದ್ಭುತ ರೀತಿಯಲ್ಲಿ ಸೆರೆಹಿಡಿದಿರುವುದನ್ನು ಚಿತ್ರದಲ್ಲಿ ಕಾಣಬಹುದು. ಈ ರೇಖಾಚಿತ್ರದಲ್ಲಿ ಮೂರು ವ್ಯಕ್ತಿಗಳ ಸಂಯೋಜನೆಯನ್ನು ಮಾಡಿದ್ದು ವಿಶೇಷವಾಗಿದೆ. ನರಸಿಂಹನ ವಸ್ತ್ರವಿನ್ಯಾಸ ಹಾಗೂ ಕೀರಿಟ ಮತ್ತು ಬಾಲಕ ಪ್ರಹ್ಲಾದನ ವಸ್ತ್ರವಿನ್ಯಾಸ, ಆಭರಣಗಳ ವಿವಿಧ ರೀತಿಯ ವಿನ್ಯಾಸಗಳು ಆಕರ್ಷಕವಾಗಿದೆ. ಈ ಚಿತ್ರಣವು ನಮ್ಮ ಹಿಂದೂ ಪುರಾಣದಲ್ಲಿ ಬರುವ ಸಿಂಹ ಮುಖಧರಿಯಾದ ಹರಿಯ ಕಥೆಯ ದೃಶ್ಯವಾಗಿದ್ದು, ಈ ದೃಶ್ಯವನ್ನು ಜ್ಞಾನೇಶ್ವರ ಅವರು ತಮ್ಮದೇ ಆದ ತಂತ್ರಗಾರಿಕೆ ಶೈಲಿಯನ್ನು ಬಳಸಿರುವುದನ್ನು ನಾವು ಕಾಣಬಹುದು. ಈ ರೇಖಾಚಿತ್ರದಲ್ಲಿಯೂ ಮಸಿ ಹಾಗೂ ರಕ್ತದ ಬಣ್ಣಕ್ಕಾಗಿ ಕೆಂಪು ಬಣ್ಣವನ್ನು ಬಳಸಿರುವುದನ್ನು ವರ್ಣಲೇಪದ ವೈಖರಿಯಲ್ಲಿ ಗೋಚರಿಸುತ್ತದೆ. ಒಟ್ಟಾರೆ ಈ ಸಂಯೋಜನೆ ಉತ್ತಮವಾಗಿ ಕಂಡುಬಂದಿದೆ.

### ೪. ಆನೆಯ ಆಕೃತಿಯಲ್ಲಿ ಸಂಗೀತಗಾರ್ತಿಯನ್ನು ಬಳಸಿಕೊಂಡು ರೇಖಾಚಿತ್ರ

ಆನೆಯ ಒಂದು ಆಕಾರದ ರೇಖಾಚಿತ್ರವನ್ನು ವಿಶೇಷವೆನಿಸುವ ಹಾಗೇ ಚಿತ್ರಿಸಿದ್ದಾರೆ. ಜ್ಞಾನೇಶ್ವರ ಅವರು ಈ ಚಿತ್ರದಲ್ಲಿ ಭಂಗಿ ಮಾತ್ರ ಆನೆಯದು. ಆದರೆ ಅದರ ಒಳಗೆ ಇರುವುದು ಮಾತ್ರ ಸಂಗೀತಗಾರ್ತಿಯರು. ಈ ಚಿತ್ರವನ್ನು ಅಕರ್ಷಕ ಹಾಗೂ ನಮ್ಮ ಮಾತಿಗೂ ಮೀರಿದ ಯೋಜನೆಯನ್ನು ಮಾಡಿ ಈ ರೇಖಾಚಿತ್ರವನ್ನು ಜ್ಞಾನೇಶ್ವರ ಅವರು ಚಿತ್ರಿಸಿದ್ದಾರೆ. ಹಾಗೂ ಕ್ರಿಯಾಶೀಲತೆಯನ್ನು ಅದ್ಬುತ ಎಂದರೆ ತಪ್ಪಿಲ್ಲ ಏಕೆಂದರೆ ಆನೆಯ ಆಕಾರವು ಯಾವ ಪ್ರಮಾಣದಲ್ಲಿ ಎಷ್ಟು ಬದ್ದವಾಗಿರಬೇಕು. ಅಷ್ಟೇ ಇದೆ ಹಾಗೂ ಆ ಸಂಗೀತಗಾರ್ತಿಯರು ಒಬ್ಬರು ತಬಲ ಹಾಗೂ ಪಿಟೀಲು, ತಂಬೂರಿ, ಡೋಲು ಹೀಗೆ ಎಲ್ಲವನ್ನು ಹಿಡಿದಿರುವ ದೃಶ್ಯಗಳನ್ನು ಕಾಣಬಹುದು. ಆ ಮಹಿಳೆಯರ ವಸ್ತ್ರವಿನ್ಯಾಸ, ಕೇಶ ವಿನ್ಯಾಸವು ತುಂಬಾ ಸುಂದರವಾಗಿ ಮೂಡಿಬಂದಿದೆ. ಒಂಬತ್ತು ಮಹಿಳೆಯರನ್ನು ಬಳಸಿ ಈ ರೇಖಾಚಿತ್ರವನ್ನು ರಚಿಸಿದ್ದಾರೆ ಹಾಗೂ ಆನೆಯನ್ನು ನಡೆಸುವ ಮಾವೂತನು ಸೇರಿದಂತೆ ಹತ್ತು ಜನರ ಸಂಯೋಜನೆಯನ್ನು ಮಾಡಲಾಗಿದೆ. ನಡೆದಾಡುತ್ತಿರುವ ಆನೆಯನ್ನು ವಿಶೇಷ ರೀತಿಯಲ್ಲಿ ಜ್ಞಾನೇಶ್ವರವರು ತಮ್ಮ ರೇಖಾಚಿತ್ರದಲ್ಲಿ ಚಿತ್ರಿಸಿದ್ದಾರೆ. ಈ ಚಿತ್ರವನ್ನು ಮಸಿಯಿಂದ ಚಿತ್ರಿಸಿದ್ದಾರೆ. ಎಲ್ಲಲ್ಲಿ ಎಷ್ಟು ಅಗತ್ಯವೆನ್ನುವ ವಿವಿಧ ರೀತಿಯ ವಿನ್ಯಾಸಗಳನ್ನು ಬಳಸಿ ಈ ಚಿತ್ರಣವನ್ನು ಪೂರ್ಣಗೊಳಿಸಿದ್ದಾರೆ.

### ೫. ಗರುಡ ವಾಹನದ ಮೇಲೆ ಕೃಷ್ಣನ ಸವಾರಿ

ಈ ಚಿತ್ರದಲ್ಲಿ ಮೊದಲಿಗೆ ಹೇಳಬೇಕಾದ ಅಂಶವೆಂದರೆ ಸಂಯೋಜನೆ ಅದ್ಬುತವಾಗಿದೆ ಕೃಷ್ಣ, ಗರುಡದೇವ, ಸರ್ಪ, ಆನೆಗಳು, ಮೊಸಳೆ ಹೀಗೆ ಪ್ರಾಣಿಗಳನ್ನು ಸಹ ಈ ರೇಖಾಚಿತ್ರದಲ್ಲಿ

ಬಳಸಿಕೊಂಡಿರುವುದನ್ನು ಕಾಣಬಹುದು. ಇದು ಕೂಡ ಸಾಂಪ್ರದಾಯಿಕ ರೇಖಾಚಿತ್ರವಾಗಿದೆ. ಅದರಲ್ಲಿ ಕೃಷ್ಣನು ಗರುಡದೇವನ ಎರಡು ಭುಜಗಳ ಮೇಲೆ ಕಾಲನ್ನು ಇಟ್ಟು ನಿಂತಿರುವುದು ನಂತರ ಗರುಡನ ಕೆಳಗೆ ಆನೆಗಳು ಹಾಗೂ ಮೊಸಳೆ ಇರುವುದು ಮತ್ತು ಕೃಷ್ಣನ ತಲೆಯ ಮೇಲೆ ಸರ್ಪವು ಇದೆ. ಅದನ್ನು ಈ ಚಿತ್ರದಲ್ಲಿ ಕಾಣಬಹುದು. ಮೊದಲಿಗೆ ಬಾಲಕೃಷ್ಣನು ಬಲಗೈಯಲ್ಲಿ ವಿಷ್ಣು ಚಕ್ರವನ್ನು ಹಾಗೂ ಎಡಗೈಯಲ್ಲಿ ಶಂಕುವನ್ನು ಹಿಡಿದು ಇನ್ನೊಂದು ಕೈಯಲ್ಲಿ ಹೂವನ್ನು ಹಿಡಿದಿರುವುದು ಗರುಡನು ತನ್ನ ಭುಜವನ್ನು ಬಾಗಿಸಿ ಬಾಲಕೃಷ್ಣನು ತನ್ನ ಭುಜದ ಮೇಲೆ ಕುಳಿಸಿಕೊಂಡು ಇರುವುದು ಕಂಡುಬರುತ್ತದೆ. ಗರುಡ ದೇವನಿಗೆ ಬಳಸಿರುವ ಭಂಗಿಯ ಹಾಗೂ ವಸ್ತ್ರವಿನ್ಯಾಸ ಮತ್ತು ಕೃಷ್ಣನ ಭಂಗಿಯೂ ವಿಶೇಷವಾಗಿದೆ ಎಂದು ಹೇಳಬಹುದು. ಈ ರೇಖಾಚಿತ್ರದಲ್ಲಿ ಪ್ರಮಾಣ ಬದ್ಧತೆಯು ತುಂಬಾ ಸುಂದರವಾಗಿ ಮೂಡಿಬಂದಿದೆ. ಇದನ್ನು ಸಹ ಕಪ್ಪು ಮಸಿ ಹಾಗೂ ಕೆಂಪು ಬಣ್ಣಗಳನ್ನು ಬಳಸಿಕೊಂಡು ಚಿತ್ರವನ್ನು ಉತ್ತಮ ರೀತಿಯಲ್ಲಿ ಸಂಯೋಜಿದ್ದಾರೆ.

## ೬. ವಿಷ್ಣುವಿನ ಕೂರ್ಮಾವತಾರ ದೃಶ್ಯ

ವಿಷ್ಣುವಿನ ಅವತಾರದಲ್ಲಿ ಒಂದಾದ ಕುರ್ಮನ ಅವತಾರದ ರೇಖಾಚಿತ್ರವಾಗಿದ್ದು ನೋಡಲು ತುಂಬಾ ಸುಂದರವಾಗಿದೆ. ಮತ್ತು ವಿಶೇಷ ವಿನ್ಯಾಸವನ್ನು ಒಳಗೊಂಡಿದೆ ವಿಷ್ಣುವಿಗೆ ನಾಲ್ಕು ಕೈಗಳು ಇದ್ದು ಒಂದು ಕೈಯಲ್ಲಿ ಶಂಕುವಿದೆ. ಮತ್ತೊಂದು ಕೈಯಲ್ಲಿ ಚಕ್ರವನ್ನು ಹಿಡಿದಿರುವುದು ಮತ್ತು ಅರ್ಧಭಾಗದಿಂದ ಆಮೆಯ ಭಂಗಿಯನ್ನು ಚಿತ್ರಿಸಿದ್ದರೆ ಮನುಷ್ಯನಲ್ಲಿ ಆಮೆಯನ್ನು ಸಂಯೋಜಿಸಿರುವುದು ವಿಶೇಷವೆನಿಸಿದೆ. ವಿಷ್ಣುನ ಭಂಗಿ ಹಾಗೂ ಕೀರಿಟದ ವಿನ್ಯಾಸದ ಆಭರಣ ಮತ್ತು ಪ್ರಮಾಣ ಅಳತೆಯು ಸುಂದರವಾಗಿ ಮುಡಿಬಂದಿದೆ. ವಸ್ತ್ರವಿನ್ಯಾಸವು ಬಹು ಸುಂದರತೆಯನ್ನು ಕಾಣುವಷ್ಟು ಚೆನ್ನಾಗಿ ಚಿತ್ರಿಸಿದ್ದಾರೆ ಜ್ಞಾನೇಶ್ವ ಅವರು ಮತ್ತು ಇದು ಸಹ ಸಾಂಪ್ರದಾಯಿಕ ಶೈಲಿಯಲ್ಲಿದೆ ಹಾಗೂ ಈ ಚಿತ್ರವನ್ನು ಕಪ್ಪು ಮಸಿಯನ್ನು ಬಳಸಿಕೊಂಡು ರೇಖಾಚಿತ್ರವನ್ನು ಪೂರ್ಣಗೊಳಿಸಿದ್ದಾರೆ. ಒಟ್ಟಾರೆ ರೇಖಾಚಿತ್ರಗಳಿಂದ ಉತ್ತಮ ರೀತಿಯ ಚಿತ್ರಸಂಯೋಜನೆ ಮಾಡಿರುವುದು ಇವರ ಕಲಾಕೃತಿಯಲ್ಲಿ ಕಂಡುಬರುತ್ತದೆ.

## ೭. ಅನಂತ ಶಯನ ದೃಶ್ಯ

ಈ ಚಿತ್ರವು ಅನಂತಶಯನು ವಿಶ್ರಾಂತಿಯನ್ನು ಪಡೆಯುತ್ತಿರುವ ದೃಶ್ಯವಾಗಿದೆ. ಇದು ಕೂಡ ಸಾಂಪ್ರದಾಯಿಕ ಶೈಲಿಯಲ್ಲಿ ಇದ್ದು. ಅನಂತಶಯನು ತನ್ನ ಕೈಯಲ್ಲಿ ಶಂಖು, ಚಕ್ರಗಳನ್ನು ಒಡಿದಿರುವುದು ಹಾಗೂ ಮಡದಿಯು ವಿಷ್ಣುವಿನ ಕಾಲನ್ನು ವತ್ತುತ್ತಿರುವುದು ಈ ರೇಖಾಚಿತ್ರದಲ್ಲಿ ಕಾಣಬಹುದು ಮತ್ತೊಬ್ಬಳು ಸಖಿಯು ಅನಂತ ಶಯನಿಗೆ ಚಮರದಿಂದ ಗಾಳಿಯನ್ನು ಬೀಸುತ್ತಿರುವ ಮತ್ತು ಅನಂತಶಯನು ಏಳು ಹೆಡೆಯ ಸರ್ಪವನ್ನು ತನ್ನ ಹಾಸಿಗೆ ಮಾಡಿಕೊಂಡು ಇದು ಕೂಡ ಸಂಯೋಜನ ಚಿತ್ರಕ್ಕೆ ಸೇರುತ್ತದೆ. ಅನಂತಶಯನು ಮಲಗಿಕೊಂಡು ಇರುವಂತೆ ಚಿತ್ರಿಸಿದ್ದಾರೆ.

ಹಾಗೂ ಮಲಗಿರುವ ಭಂಗಿ, ಮಡದಿಯರು ಕಾಲಿನ ಹತ್ತಿರ ಕುಳಿತಿರುವ ದೃಶ್ಯ, ಚಾಮರ ಬೀಸುವ ಮಹಿಳೆ ಎಲ್ಲರ ವಸ್ತ್ರವಿನ್ಯಾಸ ಸಂಯೋಜನೆ ಮಾಡಿರುವ ರೀತಿಯೂ ತುಂಬಾ ಚೆನ್ನಾಗಿ ಚಿತ್ರಿಸಿದ್ದಾರೆ. ಜ್ಞಾನೇಶ್ವರ ಅವರು ಇದು ಕೂಡ ಮಸಿಯಿಂದ ಚಿತ್ರಿಸಿದ ರೇಖಾಚಿತ್ರವಾಗಿದೆ ಎಂಬುದು ಇವರ ಚಿತ್ರಕಲಾಕೃತಿ ನೋಡಿರುವುದರಿಂದ ತಿಳಿದುಬರುತ್ತದೆ.

### ೮. ಕಲಾ ಸರಸ್ವತಿ ಚಿತ್ರ

ಕೆ. ಜ್ಞಾನೇಶ್ವರ ಅವರು ತಮ್ಮದೆ ಆದ ಒಂದು ಆಲೋಚನೆಯಲ್ಲಿ ಕಲಾ ಸರಸ್ವತಿಯನ್ನು ಚಿತ್ರಿಸಿದ್ದಾರೆ. ಸರಸ್ವತಿ ಎಂದು ಆ ವಿದ್ಯಾದೇವತೆಯನ್ನು ಸೃಷ್ಟಿಸಿದ್ದಾರೆ ಎಂಬಂತೆ ಚಿತ್ರಿಸಲಾಗಿದೆ. ಜ್ಞಾನೇಶ್ವರ ಅವರು ಕಮಲದ ಮೇಲೆ ಕಳಿತಿರುವ ದೇವತೆಯು ತನ್ನ ನಾಲ್ಕು ಕೈಗಳಲ್ಲಿ ಬಣ್ಣದ ಕುಂಚ, ಈ ರೀತಿಯಲ್ಲಿ ಜ್ಞಾನೇಶ್ವರ ಅವರು ಶಿಲ್ಪವನ್ನು ಕೆತ್ತಲು ಬಳಸುವ ಸುತ್ತಿಗೆ, ಚಾಣಿ. ಎಡಗೈಯಲ್ಲಿ ಬಣ್ಣದ ಬಟ್ಟಲು ಹೀಗೆ ಮುಖದ ಭಾವವು ತುಂಬಾ ಸುಂದರವಾಗಿ ತಮ್ಮದೇ ಶೈಲಿಯಲ್ಲಿ ಚಿತ್ರಿಸಿದ್ದಾರೆ ಹಾಗೂ ದೇವತೆಯ ಸುತ್ತಲೂ ಹೂ ಬಳ್ಳಿಯ ವಿನ್ಯಾಸಗಳನ್ನು ಚಿತ್ರಿಸಿದ್ದಾರೆ. ಸರಸ್ವತಿ ದೇವತೆಯ ವಸ್ತ್ರವಿನ್ಯಾಸ ಹಾಗೂ ಆಭರಣಗಳು ಕಮಲದ ಮೇಲೆ ಕುಳಿತಿರುವ ಭಂಗಿಯೂ ತುಂಬ ಲಾಲಿತ್ಯವಾಗಿ ಕೂಡಿರುವುದು ಕಂಡುಬರುತ್ತದೆ. ಮೈವಳಿಕೆ ಪ್ರಮಾಣಬದ್ಧತೆ ರೇಖಾಚಿತ್ರವು ಸಹ ಸಾಂಪ್ರದಾಯಿಕ ಶೈಲಿಯಲ್ಲಿ ಇದೆ ಎಂದು ಹೇಳಬಹುದು. ಜ್ಞಾನೇಶ್ವರ ಅವರು ತಮ್ಮ ಬದುಕಿನುದ್ದಕ್ಕೂ ರಚಿಸಿರುವ ಎಲ್ಲಾ ಶಿಲ್ಪಗಳಾಗಲಿ, ಚಿತ್ರಗಳಾಗಲಿ ಎಲ್ಲವೂ ಸಾಂಪ್ರದಾಯಿಕ ಶೈಲಿಯದೇ ಆಗಿದೆ ಎಂದು ಹೇಳುತ್ತಾರೆ. ಜ್ಞಾನೇಶ್ವರ ಅವರು ನಮ್ಮ ಸಂಸ್ಕೃತಿಗೆ ಬಹಳ ಗೌರವವನ್ನು ನೀಡುತ್ತಾರೆ. ಈಗಲು ಜ್ಞಾನೇಶ್ವರ ಅವರು ತಮ್ಮ ಎಲ್ಲಾ ಚಿತ್ರಗಳನ್ನು ಸಾಂಪ್ರದಾಯಿಕ ಶೈಲಿಯಲ್ಲಿಯೇ ಹೆಚ್ಚು ಬಳಸಿಕೊಂಡಿರುವುದನ್ನು ಚಿತ್ರಕಲಾಕೃತಿಯ ಅಧ್ಯಯನದಿಂದ ತಿಳಿದುಬರುತ್ತದೆ.

### ೯. ಅನೇಕ ಸರಣಿ ರೇಖಾ ಭಾವಚಿತ್ರಗಳು

ಜ್ಞಾನೇಶ್ವರವರು ಶಿವಮೊಗ್ಗದ ಬ್ಯೂಟಿ ಕಾನ್ಫರೆಷನ್‌ನಲ್ಲಿ ಕವಿಗಳ ಮತ್ತು ಗಣ್ಯವ್ಯಕ್ತಿಗಳ ೭೦ ರೇಖಾ ಭಾವಚಿತ್ರಗಳನ್ನು ಪೆನ್ಸಿಲ್‌ನಿಂದ ೨ ಗಂಟೆಗಳ ಅವಧಿಯೊಳಗಾಗಿ ಪೂರ್ಣಗೊಳಿಸಿದ್ದಾರೆ. ಅವು ನಮಗೆ ನೋಡಲು ತುಂಬಾ ಚಿಕ್ಕ ಪ್ರಮಾಣದಲ್ಲಿ ಸಿಕ್ಕುತ್ತವೆ. ನೋಡುಗನಲ್ಲಿ ಈ ರೀತಿಯ ಒಂದು ಸರಣಿ ಭಾವಚಿತ್ರಗಳನ್ನು ಕಲಾವಿದರು ಚಿತ್ರಿಸಬಹುದು ಎನ್ನುವ ಆಶ್ಚರ್ಯವನ್ನುಂಟು ಮಾಡುತ್ತದೆ.


PORTRAIT GALLERY OF R.I.PRESIDENTS WHO KEPT THE ROTARY WHEEL MOVING
ROTARY
INTERNATIONAL
SKETCHES BY

■ ಭಾವಚಿತ್ರಗಳು

## ವರ್ಣಚಿತ್ರಕಲಾ ಕೃತಿಗಳು

ಚಿತ್ರಕಲೆಯ ಚರಿತ್ರೆ ಪ್ರಾಂಭವಾಗುವುದು ಪ್ರಾಗೈತಿಹಾಸದ ಗುಹಾಚಿತ್ರಗಳಿಂದ ಚಿತ್ರರಚನೆಗಳು ಆದಿಮಾನವರಿಂದ ಸಾಂಸ್ಕೃತಿಕ ಮಾನಸೋಲ್ಲಾಸದ ಹಿನ್ನೆಲೆಯಲ್ಲಿ ಮೂಡಿಬಂದವು ಎಂದು ಅನೇಕ ಉಲ್ಲೇಖಗಳನ್ನು ಆದಿಮಾನವನ ಅಂತರ ಭಿತ್ತಿಯ ಸಂವೇದನೆಗಳು ಚಿತ್ರರೂಪದಲ್ಲಿ ಪ್ರಕಟಗೊಳ್ಳುವಿಕೆಯ ಹಿನ್ನಲೆಯಲ್ಲಿ ತನ್ನ ಸುತ್ತಲ್ಲಿನ ನಿಸರ್ಗದ ದೈನಂದಿನ ಬದುಕಿನ ರೂಪಗಳನ್ನೇ ಪುನರಾವರ್ತಿಸಿ ಕಲೆಯ ಮುಖೇನ ಭಾಷೆಯ ಸೃಷ್ಟಿಗೆ ತೊಡಗಿದ್ದು ದಿಟ.

ಆದಿಮಾನವನು ನಾಗರೀಕತೆಯ ಅರಿವು ಮೂಡುತ್ತಿದ್ದಂತೆ ತನ್ನ ಸಂಸ್ಕೃತಿಯ ತುಡಿತಗಳ ಅಭಿವ್ಯಕ್ತ ಮಾಧ್ಯಮವನ್ನಾಗಿ ಚಿತ್ರ ಬರೆಯುವಿಕೆಯನ್ನು ಮಾರ್ಪಡಿಸಿಕೊಂಡು ಶತ ಶತಮಾನಗಳು ಕಳೆದಂತೆ ಕ್ರಮೇಣ ಚಿತ್ರಕಲೆಯ ಧಾರ್ಮಿಕ ವಿಧಾನದ ಕ್ರಿಯೆಯಾಗಿ ಒಡಮೂಡಿಸುವ ನಂತರದಲ್ಲಿ ರಾಜಾಶ್ರಯ ಪಡೆದು ತನ್ನದೇ ಆದ ಪ್ರತ್ಯೇಕ ಅಸ್ತಿತ್ವವನ್ನು ಚಿತ್ರಸೃಷ್ಟಿಯ ಕ್ರಿಯೆಯಲ್ಲಿ ಕಂಡುಬರುತ್ತದೆ.

ಭಾರತದಲ್ಲಿಯೂ ರಾಜಾಶ್ರಯದ ಮೂಲಕ ಧಾರ್ಮಿಕ ಚಿತ್ರಗಳನ್ನು ಗುಹೆಗಳ ಭಿತ್ತಿಯ ಮೇಲೆ ರಚಿಸಲ್ಪಟ್ಟವು. ಉದಾಹರಣೆಗೆ ಅಜಂತಾ- ಎಲ್ಲೋರಾ ಹಾಗೂ ಕರ್ನಾಟಕದ ಹಲವೆಡೆಗಳಲ್ಲಿ ಚಾಲುಕ್ಯರು ಮೊದಲ್ಗೊಂಡು ವಿಜಯನಗರದ ಆಳುವ ಅರಸರು ನಿರ್ಮಿಸಿದ ದೇಗುಲಗಳಲ್ಲಿ ಕ್ರಮವಾಗಿ ಶೈವ, ವೈಷ್ಣವ, ಬೌದ್ಧ, ಜೈನ ಮುಂತಾದ ವಿಷಯಗಳ ದೃಶ್ಯ ಅಭಿವ್ಯಕ್ತಿಯು ಹೆಚ್ಚಾಗಿ ಭಿತ್ತಿಗಳ ಮೂಲಕವಾಗಿಯೇ ಮೂಡಿಬಂದವು. ಈಗಾಗಲೇ ರಚಿತವಾಗಿರುವ ಚಿತ್ರಕಲಾ ಕೃತಿಗಳನ್ನು ಇರಿಸಿ ಅವುಗಳ ಮೂಲಕ ಸಂಸ್ಕೃತಿಯನ್ನು ನೋಡುವುದು ಒಂದಾದರೆ ಒಂದು ಜನಾಂಗದ ಆಚರಣೆಯ ಸಂದರ್ಭದಲ್ಲಿ ರಚಿತವಾಗುವ ಕಲಾಕೃತಿಗಳಿಂದ ಅಲ್ಲಿಯ ಸಂಸ್ಕೃತಿಯನ್ನು ಪರಿಶೀಲಿಸುವುದು ಇನ್ನೊಂದು.[೧೯]

ಕಲೆಯ ಕುರಿತಾದ ವ್ಯಾಖ್ಯಾನಗಳು ವಿವಿಧ ರೀತಿಯಲ್ಲಿ ಇವೆ. ಕಲೆ ಎಂದರೆ ಏನು? ಎಂಬ ಪ್ರಶ್ನೆ ಜೀವನ ಎಂದರೆ ಏನು ಪ್ರಶ್ನೆಯಷ್ಟೇ ಜಟಿಲವಾಗಿದೆ.

ಈ ನಿಟ್ಟಿನಲ್ಲಿ ನಮ್ಮ ಪಾಶ್ಚಾತ್ಯ ಮತ್ತು ಪೌರಾತ್ಯ ಕಲಾ ವಿದ್ವಾಂಸರು ಕಲೆಯ ಬಗ್ಗೆ ವ್ಯಾಖ್ಯಾನಗಳನ್ನು ನೀಡುತ್ತ ಬಂದಿದ್ದಾರೆ. ಆದರೆ ಇದನ್ನು ಸಂಪೂರ್ಣವಾಗಿ ಸ್ವೀಕರಿಸಬೇಕೆ ಬೇಡವೆ ಎಂಬ ಗೊಂದಲದಿಂದ ನಾವಿನ್ನೂ ಹೊರಬಂದಲೆಲ್ಲ ದೃಶ್ಯಕಲೆ ಎಂದರೇನು? ಎನ್ನುವ ಬಗ್ಗೆ ಹಲವಾರು ಶತಮಾನಗಳಿಂದ ಚರ್ಚೆ ನಡೆಯುತ್ತಿದೆಯಾದರೂ ಈವರೆಗೆ ಸಮರ್ಪಕವಾದ ಸರ್ವಸಮತವಾದ ಉತ್ತರ ಸಿಕ್ಕಿಲ್ಲ. ಈ ಹಿನ್ನೆಲೆಯಲ್ಲಿ ಕಲೆ ಎಂದರೇನು? ಎನ್ನುವ ಬಗ್ಗೆ ಕೆಲವರ ಅಭಿಪ್ರಾಯಗಳನ್ನು ಚಿ.ಸು. ಕೃಷ್ಣಶೆಟ್ಟಿ ಚಿತ್ರ ಚಿತ್ತ ಗ್ರಂಥದಲ್ಲಿ ಹೀಗೆ ಸಂಗ್ರಹಿಸಿದ್ದನ್ನು ಇಲ್ಲಿ ಪುನರಾವರ್ತಿಸಲಾಗಿದೆ. ವಾತ್ಸಾಯನನ ಕಾಮಸೂತ್ರಕ್ಕೆ ಟೀಕೆಯನ್ನು ಬರೆದ ಯಶೋಧರ

೧೯. ಡಾ. ಪಿ.ಕೆ. ಹಿರೇಮಠ, ಸೃಷ್ಟಿ, ಪುಟ. ೨೧೨

ಪಂಡಿತನು ಒಂದು ಶ್ಲೋಕದ ಮೂಲಕ ಚಿತ್ರಕಲೆಯಲ್ಲಿರಬೇಕಾದ ಪಂಗಡಗಳು ಅಂದರೆ ಆರು ಅಂಗಗಳನ್ನು ಹೀಗೆ ಹೇಳಿದ್ದಾನೆ.

ರೂಪಭೇದ, ಪ್ರಮಾಣ, ಭಾವ, ನೀರಸ ಲಾವಣ್ಯ ಯೋಜನ

ಸಾದೃಶ್ಯಂ, ವರ್ಣಿಕಾಭಂಗಂ, ಇತಿ ಚಿತ್ರ ಷಡಂಗಕಮ್;

ಇದರ ಭಾವಾರ್ಥ

೧. ರೂಪಭೇದ–ಅಂದರೆ ಜೀವ, ನಿರ್ಜಿವ ವಸ್ತುಗಳಲ್ಲಿನ ವ್ಯತ್ಯಾಸ

೨. ಪ್ರಮಾಣ–ಅಂಗಾಂಗಗಳ ಪ್ರಮಾಣ, ತಾಳಮಾನ ಅಥವಾ ವಸ್ತುವಿನ ಅಳತೆ

೩. ಭಾವ–ಅಭಿವ್ಯಕ್ತಿಗೊಳಿಸುವ ರಸಭಾವ

೪. ಲಾವಣ್ಯಯೋಜನೆ – ಸೌಂದರ್ಯ ಯೋಜನೆ

೫. ಸಾದೃಶ್ಯ–ಆಂತರಿಕ ಮತ್ತು ಪ್ರಾತಿನಿಧಿಕ ಅಂಶಗಳ ಹೋಲಿಕೆ

೬. ವರ್ಣಿಕಾಭಂಗ–ವರ್ಣ ಸಂಯೋಜನೆ, ವರ್ಣ ವಿನ್ಯಾಸ

ಈ ಆರು ಅಂಗಗಳಿಂದ ಕಲೆಯು ಕೂಡಿರಬೇಕೆಂದು ಯಶೋಧರ ಪಂಡಿತ ಹೇಳುತ್ತಾನೆ.

ಪ್ಲೇಟೊವಿನ ಶಿಷ್ಯ ಅರಿಸ್ಟಾಟಲ್ (ಕ್ರಿ.ಪೂ ೩೮೪) ಕಲೆ ಮತ್ತು ಕಲಾವಿದರ ಬಗ್ಗೆ ಹಲವಾರು ವಿಚಾರಗಳನ್ನು ತಿಳಿಸಿದ ಸೃಷ್ಟಿ ಸೌಂದರ್ಯಕ್ಕೆ ಪೂರಕವಾಗುವ ಅಥವಾ ಅದರ ಸೌಂದರ್ಯಾನುಭೂತಿಗೆ ಹತ್ತಿರವಾಗುವ ನಿರ್ಮಿತ ಕಲಾಸೃಷ್ಟಿಯನ್ನು ಗ್ರಾಹ್ಯ ಮಾಡಬಹುದೆಂದು ಹೇಳಿದ. ಆದರೆ ಕೆಳದರ್ಜೆಯ ವಸ್ತುಗಳು ಉತ್ತಮವಾದುದನ್ನು ಅನುಕರಣೆ ಮಾಡಿದರೆ ಅಥವಾ ಉತ್ತಮವಾದುದನ್ನು ಗುಣ ವಿಶ್ಲೇಷಣವನ್ನು ತನ್ನಲ್ಲಿಯೇ ಪ್ರತಿಬಿಂಬಿಸಿದರೆ ಅದು ಕಲಾಕೃತಿಯಾಗುತ್ತದೆ. ಅಂದರೆ ಕಲಾಕೃತಿಗಳಲ್ಲಿ ದೈವ ಸೃಷ್ಟಿಯ ಅನುಕರಣವೆಂದು ಕರೆದು ಮೂಲವಸ್ತು ಇರುವಂತೆಯೇ ಅಥವಾ ಅದಕ್ಕಿಂತ ಹೆಚ್ಚಿನ ಚೆಲುವಿನಲ್ಲಿ ಇಲ್ಲವೆ ಕಡಿಮೆ ಚೆಲುವಿನಿಂದ ರಚಿಸಬಹುದೆಂಬ ಈ ಸಿದ್ಧಾಂತವನ್ನು ಇನ್ನಷ್ಟು ವಿಸ್ತರಿಸಿದರು.

ಟಾಲ್‌ಸ್ಟಾಯ್ ಅವರ ಪ್ರಕಾರ ಅನುಭವಿಸಿ ಆಗಿರುವ ಭಾವವನ್ನು ಒಬ್ಬಾತ ತನ್ನಲ್ಲಿ ಎಚ್ಚರಿಸಿಕೊಂಡು ಅದನ್ನು ಚಲನೆ, ರೇಖೆ, ಬಣ್ಣ, ಆಕೃತಿ ಮೂಲಕ ಅಭಿವ್ಯಕ್ತಿಗೊಳಿಸಿ ಆ ಭಾವವನ್ನು ಇನ್ನೊಬ್ಬನೆಡೆಗೆ ಪ್ರವಹಿಸಿದಾಗ ಎರಡನೆಯವನ ಮೂಲ ಭಾವನೆ ಸ್ಮರಿಸುವಂತೆ ಮಾಡುವುದೇ ಕಲೆಯ ಕೆಲಸ. ಸೌಂದರ್ಯಶಾಸ್ತ್ರಜ್ಞ ಇಮ್ಯಾನುಯಲ್ ಕ್ಯಾಂಟ್ ಅವರ ಪ್ರಕಾರ ಯಾವುದು ತಟಸ್ಥ ಶುದ್ಧವಾದ ಚಿಂತನೆಯಾಗಿದ್ದು ಅದಕ್ಕೆ ವಸ್ತುವಿನ ಇರುವಿಕೆಯ ಅವಶ್ಯಕತೆಯಲ್ಲಿ ವಸ್ತುವಿನ ಅಸ್ತಿತ್ವದ ಮೇಲಿರುವ ಆಸಕ್ತಿಯಿಂದಾಗಿ ಆ ವಸ್ತು ಒಳ್ಳೆಯದು, ಹಿತಕಾರಿ ಎಂಬ ಗುಣಗಳು ಸೇರಿರುತ್ತದೆ. ಆದರೆ ಯಾವುದು ಸುಂದರವಾಗಿದೆಯೋ ಅದು ಈ ಬಗೆಯ ಎಲ್ಲಾ

ಆಸಕ್ತಿಗಳಿಂದ ಸ್ವತಂತ್ರವಾಗಿರುತ್ತದೆ. ಇನ್ನೊಬ್ಬ ಸೌಂದರ್ಯಶಾಸ್ತ್ರಜ್ಞ ಕ್ರೋಚೆಯವರ 'ಕಲೆ ಎಂದರೆ ತಟಸ್ಥ ಅವಲೋಕನವೇ ಅಲ್ಲ ಹಗಲುಗನಸು ಕಾಣುವುದು ಅಲ್ಲ ಅದು ವ್ಯವಸ್ಥಾಪಿಸಲ್ಪಟ್ಟ ಪ್ರತಿಮೆಗಳ ಮೂಲಕ ಉಂಟಾಗುವ ಮಾನಸಿಕ ದೃಶ್ಯ ಎನ್ನುತ್ತಾನೆ[೨೦] ಎಂಬ ಅಂಶವನ್ನು ಗಮನಿಸಬಹುದು.

ಹೀಗೆ ಕಲೆಯ ಕುರಿತು ವಿವಿಧ ರೀತಿಯ ಅಭಿಪ್ರಾಯಗಳು ನಮ್ಮ ಮುಂದೆ ಇದ್ದರೂ ಸರಿಯಾದ ಉತ್ತರ ಎಂದು ನಾವು ಸ್ವೀಕರಿಸಿಲ್ಲವಾದರೂ ಇತ್ತೀಚಿನ ಆಧುನಿಕ ಸಂದರ್ಭಗಳಿಗೆ ತಕ್ಕಂತೆ ಕಲೆಯ ವ್ಯಾಖ್ಯಾನ ತನ್ನೊಳ ಸ್ವರೂಪವನ್ನು ಬದಲಿಸಿಕೊಳ್ಳುತ್ತಿರುವುದನ್ನು ನಾವು ಗಮನಿಸಬಹುದು.

ಇಷ್ಟೇ ಅಲ್ಲದೆ ಭಾರತೀಯರು ಕಲೆ ಇಂಗ್ಲೀಷನ Art ಎಂಬ ಪದಗಳ ಬಗೆಗೆ ಇದುವರೆಗೂ ನಿಶ್ಚಿತವಾದ ಮತ್ತು ಸಮರ್ಪಕವಾದ ಸೂತ್ರ, ಅರ್ಥ ವಿವರಣೆ ಕೊಡಲು ಸಾಧ್ಯವಾಗಿಲ್ಲ ಎಂಬ ಅಭಿಪ್ರಾಯವನ್ನು ಡಾ. ಬಿ.ಕೆ. ಹಿರೇಮಠರು ತಮ್ಮ ಸೃಷ್ಟಿ ಗ್ರಂಥದಲ್ಲಿ ಉಲ್ಲೇಖಿಸುತ್ತಾರೆ. ಈ ಪದಗಳ ಬಳಕೆ ಎಷ್ಟು ನಿರಂಕುಶವಾಗಿ ಬೆಳೆದಿದೆಯೆಂದರೆ ಅಡುಗೆ ಮಾಡುವುದು ಒಂದು ಕಲೆ. ದಿನಪತ್ರಿಕೆ ಮಾರುವ ಹುಡುಗ ಖರ್ಚಾಗಲು ಆಕರ್ಷಕವಾಗಿ ಕೂಗುತ್ತಿದ್ದರೆ ಅದು ಒಂದು ಕಲೆ.

ಒಬ್ಬ ಭಿಕ್ಷುಕ ದಾನಿಗಳು ಮನ ಕರಗುವಂತೆ ಭಕ್ಷಿ ಬೇಡಿದರೆ ಅದು ಒಂದು ಕಲೆ. ಹೆಚ್ಚೇಕೆ ಒಬ್ಬನು ಮೋಸ ಮಾಡಿದ್ದಾನೆಂದರೆ – ಮೋಸಮಾಡುವುದು ಕೂಡಾ ಒಂದು ಕಲೆ ಎನ್ನುತ್ತೇವೆ.[೨೧] ಈ ಉಲ್ಲೇಖಕ್ಕೆ ಪೂರಕವಾಗಿಯೇ ವಾತ್ಸಾಯನ ತನ್ನ ಕಾಮಸೂತ್ರದಲ್ಲಿ ಚೌಷ್ಠಿ ಕಾರ್ಯಗಳನ್ನು ಕಲೆ ಎಂದು ಉದ್ಘೋಷಿಸುತ್ತಾನೆ. ಅದರಲ್ಲಿಯೂ ಕೂಡಾ ಅರವತ್ತು ನಾಲ್ಕು ಕರ್ಮಗಳನ್ನು 'ಕಲೆ'ಯಂದೆ ಕರೆಯುತ್ತಾನೆ. ಆ ಅರವತ್ತು ನಾಲ್ಕು ಕಲೆಗಳಲ್ಲಿ ಚಿತ್ರಕರ್ಮವನ್ನು 'ಆಲೇಖ್ಯ' ಎಂದು ಹೆಸರಿಸುತ್ತಾನೆ.

ಡಾ. ಬಿ.ಕೆ. ಹಿರೇಮಠರು 'ಕಲೆ'ಪದದ ಬಗೆಗೆ ವಿಸ್ತೃತವಾದ ಚರ್ಚೆಯನ್ನು ಮಾಡಿದ್ದಾರೆ. 'ಕಲೆ' ಈ ಪದದ ಮೂಲವು ಕೂಡಾ ಸಂದಿಗ್ಧವಾದದು 'ಕಲೆ' ಎಂಬುವುದು ದ್ರಾವಿಡ ಮೂಲದಿಂದ ಆರ್ಯರು ಎತ್ತಿಕೊಂಡಿರಬಹುದು. ಈ ಕಲೆ ಎಂಬುದು ಶ್ರೀ ಫಣೀಂದ್ರನಾಥ ಬೋಸರ ಅಭಿಪ್ರಾಯವಾಗಿದೆ. ಕೆಲವು ವಿದ್ವಾಂಸರು 'ಸೌಂದರ್ಯ' ಎಂಬುದನ್ನು ಸೂಚಿಸುವ kalos ಎಂಬ ಗ್ರೀಕ್ ಪದಕ್ಕೂ ಕಲೆ ಎಂಬುದಕ್ಕೂ ಸಂಬಂಧ ಕಲ್ಪಿಸುವ ಪ್ರಯತ್ನಪಟ್ಟಿದ್ದಾರೆ. ಮೊನಿಯರ ವಿಲಿಯಲ್ಸ್ ಅವರು 'ಕಲೆ' ಎಂಬ ಈ ಪದದ ಮೂಲವೆ ಸಂಶಯಾಸ್ಪದವೆಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ. ಕಲಾ ಅಥವಾ ಕಲೆ ಎಂಬುದಕ್ಕೆ ಮ್ಯಾಕಡೊನೆಲ್ ಅವರು ಬೇರೆ ಬೇರೆ ಅರ್ಥಗಳನ್ನು ಕೊಡುವುದರ ಜೊತೆಗೆ Artistic, skill, art (of which there are 64) ಎಂಬುದಾಗಿ ಹೇಳುತ್ತಾರೆ. ಕಿಟೆಲ್ ಕಲೆ ಪದಕ್ಕಿರುವ ವಿವಿಧ ಅರ್ಥಗಳನ್ನು ಸೂಚಿಸುತ್ತ art practical ,any

೨೦. ಡಾ. ಬಿ.ಕೆ. ಹಿರೇಮಠ, ಸೃಷ್ಟಿ, ಪುಟ. ೨೧೨

೨೧. ಡಾ. ಬಿ.ಕೆ. ಹಿರೇಮಠ, ಸೃಷ್ಟಿ, ಪುಟ. ೨೧೨

mechanical or fine art sisxty four Such are corpentering. Architecture, jevellory, forriery, acting, dancing, music, medicine, poetry etc (ಶಿಲ್ಪವಿಕರ್ಮ, ಶಿಲ್ಪಕರ್ಮ) ಎಂಬುದಾಗಿ ವಿವರಿಸುತ್ತಾರೆ.

ಇನ್ನು ಭಾರತೀಯ ದರ್ಶನಗಳಲ್ಲಿ ಕಲೆಯ ಕುರಿತಾದ ವ್ಯಾಖ್ಯಾನಗಳನ್ನು ಹೇಳಲಾಗಿದೆ. ಋಗ್ವೇದದಲ್ಲಿ ಬರುವ ಕಲೆ ಎಂಬ ಪದಕ್ಕೆ ಅಂಶ ಅಥವಾ ಕತೃತ್ವ ಅರ್ಥೈಸುತ್ತಾರೆ. ಕಲೆ ಎಂದರೆ ದಿವ್ಯ ಶಕ್ತಿಯ ಅಥವಾ ಪರಮಾತ್ಮನ ಶಕ್ತಿಯ ಒಂದು ಕಿರಣ ಅಥವಾ ಪರಮಾತ್ಮನ ಸೃಷ್ಟ್ಯಾತ್ಮಕ ಶಕ್ತಿಯ ಒಂದು ಅಂಶ ಎಂಬುದೊಂದು ಅಭಿಪ್ರಾಯವಾದರೆ 'ಕ' ಕಾರವು ಬ್ರಹ್ಮವಾಚಕ ಆದುದರಿಂದ ಸೃಷ್ಟಿ ಧರ್ಮವನ್ನು 'ಲ' ಕಾರವು ಲಯವನ್ನು ಸೂಚಿಸುವುದರಿಂದ ಕಲೆಯು ಸೃಷ್ಟಿ ಸ್ಥಿತಿ ಸಂಹಾರ ರೂಪವಾದುದು ಎಂಬುದು ಇನ್ನೊಂದು ಅಭಿಪ್ರಾಯವಾಗಿದೆ. ಕ-ಲ ಎಂಬಕ್ಷರಗಳಲ್ಲಿ ಲಲಿತಾ ತ್ರಿಪುರ ಸುಂದರಿಯ ಸ್ವರೂಪವು ನಿರ್ದಿಷ್ಟವಾಗಿದೆ. ಶ್ರೀ ವಿದ್ಯೋಪಾಸನೆಯ ಬಹಿರ್ಯುಗ ಕ್ರಮದಲ್ಲಿ ಚಂದ್ರಮಂಡಲದ ಹದಿನಾರು ಕಲೆಗಳನ್ನು ಉಪಾಸನೆ ಮಾಡುವಾಗ ಮುಖ್ಯವಾದುದು ಸಾದಾಖ್ಯ? ಕಲೆಯೆ ತ್ರಿಪುರ ಸುಂದರಿ ಸ್ವರೂಪ. ಈ ಹದಿನಾರು ಕಲೆಗಳಿಂದ ನಾಲ್ಕು ಭಾಗಗಳಾಗಿ ಅರವತ್ತು ನಾಲ್ಕು ಕಲೆಗಳೂ ಅಕ್ಷರಗಳೂ ಹುಟ್ಟಿದವು ಎಂಬುದಾಗಿ ಪ್ರಪಂಚ ಸಾರ ಮಾತೃಕಾರ್ಣವ ಗ್ರಂಥಗಳು ವಿವರಿಸುತ್ತವೆ.[೨೨] ಕಲೆಯ ಕುರಿತಾಗಿ ಇನ್ನೂ ಫ್ರೆಂಚ್, ಸ್ಪಾನಿಕ, ಲ್ಯಾಟಿನ ಬಗೆ ಬಗೆಯ ಅರ್ಥಗಳು ಇದ್ದರೂ ಭಾರತೀಯ ದೃಷ್ಟಿಯಲ್ಲಿ ವಿದ್ಯೆ ಹಾಗೂ ಕಲೆಗಳು ಗುರಿ ಪರಮಾತ್ಮನನ್ನು ಅರಿಯುವುದು. ಆ ಬಗೆಗೆ ಜ್ಞಾನ ಮಾಡಿಕೊಡುವುದು ಆಗಿದೆ ಕಲಾ ಎಂಬ ಪದಕ್ಕೆ ಪಂಡಿತರು ನಾನಾ ಅರ್ಥವನ್ನು ಕೊಟ್ಟರೂ ಶಬ್ಧಕ್ಕೂ ಸಾಮಾನ್ಯವಾದ ಅರ್ಥ ಉಪಾಯ ಅಥವಾ ಕೌಶಲ್ಯ ಎಂಬುದು ಯಾವ ಉಪಾಯದಿಂದ ನಮ್ಮ ಭಾವನೆಗಳನ್ನು ಆಲೋಚನೆಗಳನ್ನು ಮನಮುಟ್ಟುವ ರೀತಿಯಲ್ಲಿ ತಿಳಿಸಬಹುದೋ ಅಂತಹ ವಿಧಾನವೇ ಕಲೆ ಎನ್ನಬಹುದು.[೨೩]

ಸುಸ್ಯಾನ್ ಲ್ಯಾಂಗರ್ ಕಲೆಗಳು ವ್ಯಕ್ತಿನಿಷ್ಠವಾದ ವಾಸ್ತವಿಕತೆಯನ್ನು ವಸ್ತು ನಿಷ್ಠಗೊಳಿಸುತ್ತದೆ. ನಿಸರ್ಗದ ಬಾಹ್ಯನುಭವಗಳನ್ನು ವ್ಯಕ್ತಿಗತವನ್ನಾಗಿಸುತ್ತವೆ. ಕಲೆಯಲ್ಲಿ ಶಿಕ್ಷಣ ಎಂದರೆ ಅನುಭೂತಿಗಳ ಶಿಕ್ಷಣ, ಭಾವನೆಗಳ ಶಿಕ್ಷಣ, ಈ ಶಿಕ್ಷಣವನ್ನು ಅಲಕ್ಷ್ಯ ಮಾಡಿದ ಸಮಾಜ ಯಾವುದೇ ರೂಪ ನಿಯಂತ್ರಣ ಇಲ್ಲದ ಭಾವನೆಯ ವಶವಾಗುತ್ತದೆ. ಕೆಟ್ಟಕಲೆ ಭಾವನೆಯನ್ನು ಹೊಲಗೆಡಿಸುತ್ತದೆ. ಆದ್ದರಿಂದ ಕೆಟ್ಟಕಲೆ ಇರುವುದಕ್ಕಿಂತ ಕಲೆಯೇ ಇಲ್ಲದಿರುವುದು ಉತ್ತಮ[೨೪] ಎಂಬ ಹೇಳಿಕೆ ಕಲೆಯ ಕುರಿತಾದ ನಿಷ್ಠುರ ಹಾಗೂ ಕಳಕಳಿಯನ್ನು ಪ್ರತಿನಿಧಿಸುತ್ತದೆ.

ಶತಮಾನಗಳಿಂದ ಕಲೆಯನ್ನು ಕುರಿತು ನೂರಾರು ಹೇಳಿಕೆಗಳು, ವ್ಯಾಖ್ಯೆಗಳು ಅಭಿಪ್ರಾಯಗಳು ಬಂದಿವೆ ಬರುತ್ತಿವೆ. ಹೀಗೆ ಇವುಗಳನ್ನೆಲ್ಲ ಚರ್ಚಿಸುತ್ತ ಹೋದರೆ ಸಾಮಾನ್ಯರಲ್ಲಿ ಗೊಂದಲ

೨೨. ಡಾ. ವಿ.ಕೆ. ಹಿರೇಮಠ, ಸೃಷ್ಟಿ, ಪುಟ. ೨೧೨
೨೩. ಚಿ.ಸಂ. ಕೃಷ್ಣಶೆಟ್ಟಿ, ಚಿತ್ರಚಿತ್ತ, ಪುಟ-೫೯
೨೪. ಚಿ.ಸಂ. ಕೃಷ್ಣಶೆಟ್ಟಿ, ಚಿತ್ರಚಿತ್ತ, ಪುಟ-೫೯

ನಿರ್ಮಾಣವಾಗುವಷ್ಟು ಹೇಳಿಕೆಗಳಂತೆ, ವಿಶ್ಲೇಷಣೆಗಳಿವೆ. ಇವುಗಳನ್ನೆಲ್ಲ ಪಕ್ಕಕ್ಕಿಟ್ಟು ಒಟ್ಟಿನಲ್ಲಿ ಕಲಾವಿದನ ಭಾವನೆಗಳ ಕಲಾತ್ಮಕ ಅಭಿವ್ಯಕ್ತಿಯನ್ನು ಕಲೆ ಎಂದು ಸರಳವಾಗಿ ಹೇಳಬಹುದೆನಿಸುತ್ತದೆ. ಅದರಂತೆಯೇ ಮುದ ನೀಡುವಂತಹ ಆಕೃತಿಗಳನ್ನು ಸೃಷ್ಟಿಸುವ ಕಲಾತ್ಮಕ ಪ್ರಯತ್ನವೇ ಕಲೆ ಎಂದೆನ್ನಲೂಬಹುದು. ಕಥೆಗಾರ ಯಶವಂತ ಚಿತ್ತಾಲರು ಹೀಗೆ ಹೇಳುತ್ತಾರೆ– ಕಲೆ ಎಂದರೆ ಮುಖ್ಯವಾಗಿ ನಮ್ಮ ಸುಪ್ತ ಪ್ರಜ್ಞೆಗೆ ನಾವು ಜಾಗೃತಿ ಸ್ಥಿತಿಯಲ್ಲಿ 'ಎಚ್ಚರ'ದ ಸ್ಥಿತಿಯಲ್ಲಿ ಆಕಾರ ಕೊಡುವ ವಿಧಾನ. ಈ ಎಚ್ಚರದ ಅಂಶದಿಂದಾಗಿಯೇ ಅದು ಮಾನವ ಮನಸ್ಸಿನ ಉಳಿದ ಅವಿಷ್ಕಾರಗಳಾದ ಪುರಾಣಗಳು ಕನಸುಗಳು ಹಾಗೂ ನ್ಯೂರೊಸಿಸ್(ನರವ್ಯಾದಿ) ಇವುಗಳಿಂದ ಬೇರೆಯಾಗುತ್ತವೆ. ಹೆಸರಾಂತ ಮನಃಶಾಸ್ತ್ರಜ್ಞ ಕಾರ್ಲ್‌ಯುಂಗನ ಪ್ರಕಾರ ಮನುಷ್ಯನ ಚಿತ್ತ ಎಲ್ಲ ಮಾನವೀಯ ಚಟುವಟಿಕೆಗಳಿಗೆ – ಸಂಸ್ಕೃತಿ ನಾಗರಿಕತೆಗಳಿಗೆ – ಕೇಂದ್ರ ಸ್ಥಾನವಾಗಿದೆ. ಈ ಚಟುವಟಿಕೆಗಳ ಮೂಲಕವಾಗಿಯೇ ಮನುಷ್ಯನ ಜಾಗೃತ ಪ್ರಜ್ಞೆಯು ಸುಪ್ತ ಪ್ರಜ್ಞೆಯ ತತ್ವಗಳನ್ನು ತನ್ನಲ್ಲಿ ನಿರಂತರವಾಗಿ ಅರಗಿಸಿಕೊಳ್ಳುತ್ತ ವಿಕಾಸಗೊಳ್ಳುತ್ತದೆ.[೨೫]

ಹೀಗೆ ಕಲೆಯ ಕುರಿತಾದ ಹೇಳಿಕೆಗಳು ನೂರಾರು ಬಂದರೂ ಕಲಾವಿದರ ಅಭಿವ್ಯಕ್ತಿಯ ಸ್ವರೂಪವನ್ನು ಬದಲಾವಣೆ ಮಾಡಿಲ್ಲ. ಅದು ತನ್ನಿಂದ ತಾನಾಗಿಯೇ ಕಾಲಾನುಕ್ರಮವಾಗಿ ಬದಲಾವಣೆಯಾಗುತ್ತ ಕಲೆ ಎಂದರೇನು? ಎಂಬ ಪ್ರಶ್ನೆಯ ಬಗೆಗೆ ಯಾವುದೇ ರೀತಿಯ ಸ್ಪಂದನೆಯನ್ನು ನೀಡಿಲ್ಲವೆಂಬುದಕ್ಕೆ ಇಂದಿನ ಕಲಾಸೃಷ್ಟಿಗಳೆ ಕಾರಣ.

ಚಿತ್ರ ಒಂದು ದೇಶಬದ್ದ ಕಲೆ ಎಂದೂ ಗುರುತಿಸಲಾಗುತ್ತದೆ. ಅದರಂತೆಯೇ ಸಂಗೀತ, ನಾಟಕಗಳನ್ನು ಕಾಲಬದ್ಧ ಎಂದೂ ಗುರುತಿಸುತೇವೆ.[೨೬] ಚಲನರಹಿತವಾದ ಚಿತ್ರ ಕಾಲಬದ್ಧ ಕಲೆಗಿಂತ ಪ್ರಭಾವಿ ಎಂಬುದನ್ನು ಪ್ರಪಂಚದಲ್ಲಿ ಪ್ರಮುಖ ಚಿತ್ರ ನೆಲೆಗಳನ್ನು ಆಧರಿಸಿ ಹೇಳಬಹುದಾಗಿದೆ. ಗ್ರೀಕ್ ಕವಿ ಪ್ಲೊಟಾರ್ಕ್ ಅದಕ್ಕೆಂದೇ ಚಿತ್ರವನ್ನು ನಿಶ್ಯಬ್ಧವಾದ ಕವಿತೆ ಎಂದು ವರ್ಣಿಸುತ್ತಾನೆ. ಒಂದು ಚಿತ್ರ ಒಬ್ಬೊಬ್ಬ ನೋಡುಗನಿಗೆ ವೈವಿಧ್ಯಮಯ ಅನುಭವವನ್ನು ನೀಡಬಹುದಾದ ಸಾಧ್ಯತೆಗಳೆ ಹೆಚ್ಚು. ಅದರಲ್ಲೂ ಇತ್ತೀಚಿನ ಆಧುನಿಕ ಚಿತ್ರಗಳ ಒಲವು ವಿಭಿನ್ನ ಅನುಭವಗಳನ್ನು ನೀಡುವಲ್ಲಿ ಮುಂಚೂಣಿಯಲ್ಲಿವೆ.

ನಮ್ಮ ಪ್ರಾಚೀನ ಚಿತ್ರಕಲೆಯ ಸ್ವರೂಪ ಇಂದು ಇಲ್ಲದಿದ್ದರೂ ಸಾಂಪ್ರದಾಯಿಕ ಸಂದರ್ಭದಲ್ಲಿ ಪ್ರಾಚೀನ ಕಲಾ ಶೈಲಿಯನ್ನು ಇಂದಿನ ಆಧುನಿಕ ಸಂಧರ್ಭದಲ್ಲಿಯೂ ಆಗಾಗ ಪುನರಾವರ್ತಿಸಿ ಕೊಳ್ಳುತ್ತೇವೆ. ಹೇಗೆ ಎಂದರೆ ನಮ್ಮ ನಾಡಿನ ಆಧುನಿಕೋತ್ತರ ಕಲಾಚಳುವಳಿಯಲ್ಲಿ ಪ್ರಕಟ ಗೊಳ್ಳುತ್ತಿರುವ ಚಿತ್ರಗಳಲ್ಲಿ ಪ್ರಾಚೀನ ಎನ್ನುವಂತಹ ಸಾಂಪ್ರದಾಯಿಕ ರೂಪಾಂಶಗಳು ವಿಕೃತತೆಯ ರೂಪದಲ್ಲಿ ಆಧುನಿಕ ಸಂವೇದನೆಗಳನ್ನು ಹೊತ್ತು ಬರುತ್ತಿರುವುದನ್ನು ಪ್ರಸ್ತುತ ಸಂದರ್ಭದಲ್ಲಿ ಕಾಣಬಹುದುದು.

೨೫. ಹೆಚ್ಚಿನ ವಿವರಗಳಿಗೆ ನೋಡಿ : ಚಿ.ಸಂ. ಕೃಷ್ಣಶೆಟ್ಟಿ, ಚಿತ್ರಚಿತ್ತ, ಪುಟ–೫೩
೨೬. ಎನ್. ಮರಿಶಾ ಮೇಚಾರ್ (ಸಂ) ಕಲಾಕೋಶ, ಪುಟ–೩೩೧

## ಸಂಯೋಜನಾ ಚಿತ್ರಕಲಾಕೃತಿಗಳು

ಚಿತ್ರ ಸಂಯೋಜನೆಯ ಮೂಲ ತತ್ವಗಳಾದ ರೇಖೆ, ಆಕೃತಿ, ವರ್ಣವಿನ್ಯಾಸ, ಮೈವಳಿಕೆ ಮತ್ತು ಸ್ಥಳಾವಕಾಶ ಮುಂತಾದವುಗಳ ಅರ್ಥವ್ಯಾಪ್ತಿಗಳು ಐಕ್ಯತೆ, ಸಾಮರಸ್ಯತೆ, ಸಮತೂಕ, ತರಂಗ ಬದ್ದತೆ ಮತ್ತು ಪ್ರಮಾಣ ಮುಂತಾದ 'ಚಿತ್ರಸಂಯೋಜನೆ'ಯ ನಿಯಮಗಳನ್ನು ತಿಳಿದಿಲ್ಲದೆ, ಚಿತ್ರ ಸಂಯೋಜನೆಯ ಪರಿಪೂರ್ಣ ಕೃತಿಯೆನಿಸಲು ಸಾಧ್ಯವಿಲ್ಲ. ಪ್ರತಿಯೊಂದು ರೇಖೆ, ವರ್ಣಗಳಿಗೆ ಪ್ರತ್ಯೇಕವಾದ ಗುಣ ಸ್ವಭಾವಗಳಿರುವುದರಿಂದ ಕಲಾವಿದನು ಚಿತ್ರಿಸಿದಾಗಲೆ ಚಿತ್ರವು ಅರ್ಥಪೂರ್ಣವಾಗುತ್ತದೆ. ಚಿತ್ರಸಂಯೋಜನೆ ಸಾಂಪ್ರದಾಯಕವಾದಲ್ಲಿ ಆಧುನಿಕವಾದಲ್ಲಿ ಆಧುನಿಕ ಪಂಥಗಳ ಅನುಸಾರವಾದಲ್ಲಿ. ಸಮಕಾಲೀನ ಕೃತಿಗಳಾಗಲಿ ಅದರಲ್ಲಿ ಚಿತ್ರ ಸಂಯೋಜನೆಯ ಮೂಲತತ್ವಗಳಾಗಲಿ, ನಿಯಮ ನಿಬಂಧನೆಗಳಾಗಲೀ ಇಲ್ಲದೇ ಹೋದಲ್ಲಿ ಅದೊಂದು ಪರಿಪೂರ್ಣ ಕಲಾಕೃತಿಯಾಗಲಾರದು.[೨೭]

ಚಿತ್ರ, ಶಿಲ್ಪಗಳಲ್ಲಿ ಸಂಯೋಜನೆ ಎಂಬುದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಒಂದೇ ಆಕೃತಿ ಇದ್ದರೆ ಅದು ತನ್ನಷ್ಟಕ್ಕೆ ಅಥವಾ ಹಲವಾರು ಆಕೃತಿಗಳಿದ್ದರೆ ಅದು ನೋಡಲು ದೃಷ್ಟಿಗೆ ಹಿತವಾಗಿರುವಂತೆ ಇರಿಸುವುದೇ ಸಂಯೋಜನೆಯಾಗಿರುತ್ತದೆ. ಸೃಜನಶೀಲ ಕಲಾವಿದ ತನ್ನಷ್ಟಕ್ಕೆ ಯಶಸ್ವಿಯಾಗಿ ಆಕಾರಗಳನ್ನು ಫಲಕದ ಮೇಲೆ ಇರಿಸಬಲ್ಲ. ಆದರೂ ಪಾಶ್ಚಿಮಾತ್ಯರಲ್ಲಿ ಯಾವ ಬಗೆಯ ಭಾವನೆಯ ಆಕಾರಗಳನ್ನು ಯಾವ ಕಥಾ ಸಂದರ್ಭದಲ್ಲಿ ಹೇಗೆ ಇರಿಸಬೇಕೆಂಬುದು ಅವುಗಳಿಗೆ ಪೂರಕವಾಗಿ ಹಿನ್ನೆಲೆ ಮುನ್ನೆಲೆಗಳನ್ನು ತುಂಬಬೇಕೆಂಬ ಬಗ್ಗೆ ನಿಶ್ಚಿತ ತತ್ವ(ಥಿಯರಿ)ಗಳನ್ನು ಪ್ರತಿಪಾದಿಸಿದೆ.

ಆಕೃತಿಗಳು ಉದ್ದವಾಗಿದ್ದರೆ ಮುಖಂಡನಂತೆ ಕಾಣುವುದೆಂದೂ, ಅಡ್ಡವಾಗಿದ್ದರೆ ಮಲಗಿದ ವಿಶ್ರಾಂತ ಸ್ಥಿತಿಯಲ್ಲಿದ್ದಂತೆಯೇ, ಮೂಲೆಯಿಂದ ಮೂಲೆಗೆ ಅಡ್ಡ ಹಾಯ್ದಿದ್ದರೆ ಹಾರಾಟದ ಅನುಭವ ನೀಡುವುದೆಂದೂ, ತ್ರಿಕೋಣಾಕಾರದ ರಚನೆಯಲ್ಲಿ ಬಲಿಷ್ಠತೆಯನ್ನು ಕಾಣಬಹುದೆಂದೂ ವ್ಯಾಖ್ಯಾನಗಳಿವೆ.[೨೮]

ಸಾಮಾನ್ಯವಾಗಿ ಅಡ್ಡ ಅಗಲವಿರುವ ಫಲಕದಲ್ಲಿ ದೃಷ್ಟಿ ಅಡ್ಡಕ್ಕೆ ಹಾಯುವುದರಿಂದ ಆಕಾರಗಳನ್ನುಸಲಾಗಿ ಇರಿಸಬೇಕೆಂದೂ, ಎತ್ತರ ಹೆಚ್ಚಿರುವ ಫಲಕದಲ್ಲಿ ದೃಷ್ಟಿ ಕೆಳಗಿನಿಂದ ಮೇಲೆ ಹಾಯುವುದರಿಂದಲೂ ಚೌಕವಾದ ಆಕೃತಿಯಲ್ಲಿ ವೃತ್ತಾಕಾರವಾಗಿ ದೃಷ್ಟಿ ಹರಿಯುವುದರಿಂದ ಇವುಗಳಿಗೆ ಪೂರಕವಾಗಿ ಆಕೃತಿಗಳನ್ನು ಇರಿಸಬೇಕೆಂದು ಹೇಳಿಕೆಗಳಿವೆ.

ಮೇಲಿನ ಎರಡೂ ಉಲ್ಲೇಖಗಳೂ ಸಂಯೋಜನೆಯ ವಿಧಿ ವಿಧಾನಗಳ ಹಾಗೂ ಒಂದು ಕ್ರಮಬದ್ಧ ಚಿತ್ರ ಸಂಯೋಜನೆಯ ಅವಶ್ಯಕತೆಗಳನ್ನು ಒತ್ತಿ ಹೇಳುತ್ತವೆ. ಇದನ್ನೆ ಕಲಾಶಾಲೆಗಳಲ್ಲಿ

೨೭. ಎಸ್. ಮರಿಶಾ ಮೇಜಾರ್ (ಸಂ) ಕಲಾಕೋಶ, ಪುಟ ೩೩೧–೩೩೨

೨೮. ಚಿ. ಸಂ. ಕೃಷ್ಣಶೆಟ್ಟಿ, ಸಂಕುಲ. ಸಂ. ೧೭. ಜುಲೈ–ಅಗಸ್ಟ್–೧೯೯೬; ಪುಟ–೪೦

ಸಂಯೋಜನಾ ವಿಷಯವನ್ನು ಬೋಧಿಸುವಾಗ ಹೇಳುವ ಸಂಪ್ರದಾಯ ಈಗಲೂ ಇದೆ. ಆದರೆ ವೃತ್ತಿಪರತೆಯ ಗುಣವನ್ನು ಹೊಂದಿದ ಕಲಾವಿದನ ಕಲಾಕೃತಿಗಳಲ್ಲಿ ಸಂಯೋಜನೆಯ ತತ್ವಗಳು ತನ್ನಿಂದ ತಾನಾಗಿಯೇ ಸಂಯೋಜನೆಗೊಳ್ಳುವ ಸಹಜ ಪ್ರಕ್ರಿಯೆ ನಡೆಯುತ್ತದೆ. ಇಲ್ಲಿ ವ್ಯಾಕರಣದ ಅನುಸಾರವಾಗಿ ರಚಿಸಬೇಕೆಂಬ ಪ್ರಜ್ಞಾಪೂರ್ವಕ ಕಲ್ಪನೆಯಿಂದ ಚಿತ್ರರಚಿಸುವ ಅಗತ್ಯತೆ ಇರುವುದಿಲ್ಲ ಅದು ಸಹಜ ಕ್ರಿಯೆಯಾಗಿ ನಡೆಯುತ್ತಿರುತ್ತದೆ.

ಜ್ಞಾನೇಶ್ವರ ಅವರ ಕಲಾಕೃತಿಗಳು ಸುಲಭವಾಗಿ ಗ್ರಾಹ್ಯವಾಗುವ ನೆಲೆಯಲ್ಲಿ ವೈವಿಧ್ಯತೆಯಿದೆ. ಆಕೃತಿಗಳಲ್ಲಿ ಹೀಗೆ ಹಲವಾರು ನಿಟ್ಟಿನ ದೃಶ್ಯ ಸಾಧಕರುಗಳು ಸಂಕೀರ್ಣವಾಗಿರುವುದರೊಂದಿಗೆ ನೋಡುಗರಿಗೂ ಸವಾಲು ಹಾಕುವ ಗುಣವನ್ನೂ ಹೊಂದಿವೆ ಎಂಬುದು ಇಲ್ಲಿ ಸ್ಪಷ್ಟವಾಗಿ ಕಂಡಬರುತ್ತದೆ.

ಮೂಲತಃ ಭಾವಚಿತ್ರಗಳನ್ನು ಕುರಿತಂತೆ ಹೆಚ್ಚು ಒಲವುಳ್ಳವರಾಗಿದ್ದ ಜ್ಞಾನೇಶ್ವರ ಗಂಭೀರವಾಗಿ ಈ ಸಂಯೋಜನಾ ಚಿತ್ರಗಳಿಗೆ ಒಪ್ಪಿಸಿಕೊಂಡದ್ದು ತಮ್ಮ ೩೦ ಅಥವಾ ೩೨ನೇ ವಯಸ್ಸಿನಲ್ಲಿ ಕರ್ನಾಟಕದಲ್ಲಿ ಆ ಹಿಂದೆ ನವ್ಯಕಲಾವಿದರು ಇರದೇ ಇದ್ದುದರಿಂದ ಈ ದಿಸೆಯಲ್ಲಿ ಮಾರ್ಗದರ್ಶನ ಮಾಡುವಂತಹ ಕಲಾವಿದರು ಮನೆಯಲ್ಲಿ ಇದ್ದರು. ಹಾಗಾಗಿ ಗುರುವಿನ ಉಪಸ್ಥಿತಿಯಲ್ಲಿದ್ದು ನಂತರ ನವ್ಯದ ಪರಿಚಯವಿಲ್ಲದಿರುವುದರಿಂದ ರಿಯಾಲಿಸಂನ ನೆಲೆಯಲ್ಲಿಯೇ ನವ್ಯವನ್ನು ಅರಿಯುವ ಪ್ರಯತ್ನ ಮಾಡಿದರು. ಈಗಿನಂತೆ ಕಲಾ ಪ್ರದರ್ಶನಗಳಾಗಲಿ, ಚಟುವಟಿಕೆಗಳಾಗಲಿ ನಡೆಯದ ಆ ಅವಧಿಯಲ್ಲಿ ಕಲಾಪುಸ್ತಕಗಳ ಮೊರೆ ಹೋಗುವುದು ಅನಿವಾರ್ಯವಾಗಿತ್ತು. ಪುಸ್ತಕಗಳ ನೆರವಿನಿಂದ ಪಿಕಾಸೊ ಹೆನ್ರಿಮಾತಿಸ್‌ನಂತಹವರ ಕೃತಿಗಳನ್ನು ಅರಿಯಲು ಪ್ರಯತ್ನಿಸಿದ್ದು. ಅಂತೆಯೇ ಆ ಅವಧಿಯ ಅವರ ಆರಂಭದ ಕೃತಿಗಳಲ್ಲಿ ಪಿಕಾಸೊವಿನ ನೇರ ಪ್ರಭಾವ ಗುರುತಿಸಬಹುದು. ಡೆಕೋರೇಟಿವ್ ಅಂಚಿನಲ್ಲಿಯೆ ಕ್ಯೂಬಿಸ್ಟ್ ರೂಪಗಳನ್ನು ದುಡಿಸಿಕೊಂಡು ಈ ಕೃತಿಗಳಲ್ಲಿ ಪಿಕಾಸೊ ಕೃತಿಗಳಲ್ಲಿ ಕಂಡುಬರುವಂತಹ ರೂಪವಿರುತ್ತದೆ ಎಂಬ ಅಂಶಗಳನ್ನು ತಿಳಿಸುತ್ತದೆ.[೨೯] ಹಾಗಿದ್ದರೂ ಅಲ್ಲಿನ ರೂಪ ಪಾಶ್ಚಾತ್ಯವೆನಿಸಿದರೂ ವಸ್ತು ಅನುಭವಗಳು ಇಲ್ಲಿಯವೆ ಆಗಿದ್ದವು.[೩೦] ಹೀಗೆ ಜ್ಞಾನೇಶ್ವರ ಅವರು ಸ್ವವಿವೇಚನೆಯಿಂದ ಪಾಶ್ಚಾತ್ಯ ಆಧುನಿಕ ಕಲೆಯನ್ನು ಶತಮಾನದಲ್ಲಿರಿಸಿಕೊಂಡು ದೇಶಿಯವೆನಿಸುವ ಆಧುನಿಕ ಕಲಾರಚನೆಗೆ ತಮ್ಮ ಅಭಿವ್ಯಕ್ತಿಯನ್ನು ಅರ್ಪಿಸಿಕೊಂಡಿದ್ದಾರೆ. ತಮ್ಮ ಇದುವರೆಗಿನ ಬದುಕಿನ ದಿನಗಳಲ್ಲಿ ಸಾವಿರಾರು ಕಲಾಕೃತಿಗಳನ್ನು ವಾಣಿಜ್ಯೋತರ ನೆಲೆಯಲ್ಲಿ ರಚಿಸಿದ್ದಾರೆ. ಬೇರೆಯವರಂತೆ ಅಲ್ಲಿ ಕಲಾಸೃಷ್ಟಿಗಳಲ್ಲಿ ಕಲೆಗಾಗಿ ಕಲೆ ಎಂಬ ದೃಷ್ಟಿಕೋನವಿಲ್ಲ. ಬದಲು ಬದುಕಿನ ಸಾರ್ಥಕ ಮೂಲಾಕೃತಿಗಳನ್ನು ಕಾಣುವ ಬಗೆ ಇದೆ. ಹೀಗೆ ಜ್ಞಾನೇಶ್ವರ ಅವರ ಕಲಾ ಸೃಷ್ಟಿಗಳಲ್ಲಿ ವೈವಿಧ್ಯತೆಗಳು ಅಡಕವಾಗಿ ನೋಡುಗನಿಗೆ ವಿಸ್ಮಯ, ಅಷ್ಟೇಕೆ ಕುತೂಹಲ ಕೇರಳಿಸುವ ರೂಪಗಳು ಬಗೆ ಬಗೆಯ ರಸಾನುಭವಗಳನ್ನು ನೀಡುವಲ್ಲಿ

೨೯. ಚಿ. ಸಂ. ಕೃಷ್ಣಶೆಟ್ಟಿ, ಸಂಕುಲ. ಸಂ. ೧೭. ಜುಲೈ-ಅಗಸ್ಟ್-೧೯೯೬; ಪುಟ-೪೦
೩೦. ಎನ್. ಮರಿಶಾ ಮೇಚಾರ್ (ಸಂ) ಕಲಾಕೋಶ. ಪುಟ-೧೬೧

ತಮ್ಮ ಮುಖ್ಯ ಪಾತ್ರವನ್ನು ವಹಿಸುತ್ತವೆ. ಅವುಗಳಲ್ಲಿ ವರ್ಣಚಿತ್ರಗಳು ಬಹುತೇಕ ಎಲ್ಲ ಮಾಧ್ಯಮಗಳಲ್ಲಿ ರಚಿತಗೊಂಡಿವೆ. ಪ್ರತಿ ಮಾಧ್ಯಮದಲ್ಲೂ ಸಾಂಪ್ರದಾಯಿಕ ರಚನಾ ವಿಧಾನಗಳ ಜೊತೆಗೆ ಅಸಂಪ್ರದಾಯಿಕವಾದ ಅಥವಾ ಸಾಂಪ್ರದಾಯಿಕ ವಿಧಾನಕ್ಕೆ ವಿರುದ್ಧವಾಗಿ ಪ್ರತಿಭಟಿಸುವ ಹಾಗೆ ಆ ಮಾಧ್ಯಮವನ್ನು ಹೊಸ ಜಾಡಿಯಲ್ಲಿ ತೆಗೆದುಕೊಂಡು ಹೋಗುವ ಪ್ರಯೋಗಶೀಲತೆಯನ್ನು ಜ್ಞಾನೇಶ್ವರ ಅವರು ಇಲ್ಲಿ ಪ್ರಕಟಿಸಿದ್ದಾರೆ. ಅದು ವಿಶೇಷವಾಗಿ ಸಂಯೋಜನೆ ಕಲಾಕೃತಿಗಳಲ್ಲಿ ಈ ಬಗೆಯ ಪ್ರಯೋಗವನ್ನು ಕಾಣಬಹುದು. ಈ ಅಧ್ಯಾಯದಲ್ಲಿ ಭಾವಚಿತ್ರಗಳು, ಪ್ರಕೃತಿಚಿತ್ರಗಳು ವ್ಯಕ್ತಿಚಿತ್ರಣಗಳು ಮತ್ತು ಸ್ಥಿರಚಿತ್ರಣಗಳು ಸಂಯೋಜನೆಗೊಂಡಿರುವುದನ್ನು ಕಾಣಬಹುದು.

ಅವರು ಈ ಹಿನ್ನೆಲೆಯಲ್ಲಿ ಜ್ಞಾನೇಶ್ವರ ಅವರು ತಮ್ಮ ಬದುಕಿನುದ್ದಕ್ಕೂ ರಚಿಸಿದ ವರ್ಣಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಮುಖವಾಗಿ ಇಲ್ಲಿರುವ ಕಲಾಕೃತಿಗಳು ಸಂಯೋಜನೆ ಭಾವಚಿತ್ರ, ಪ್ರಕೃತಿಚಿತ್ರ ಹಾಗೂ ಅಮೂರ್ತ ಚಿತ್ರಗಳನ್ನು ಇಲ್ಲಿ ಮಾಡಲಾಗಿದೆ. ಅಧ್ಯಯನದ ಸ್ಪಷ್ಟತೆಯ ದೃಷ್ಟಿನಿಂದ ವಿಷಯಕ್ಕೆ ಅನುಗುಣವಾಗಿ ವರ್ಗೀಕರಿಸಿದೆ. ಈ ಕೆಳಗಿನಂತೆ ಮಾಧ್ಯಮವಾರು ಕಲಾಕೃತಿಗಳನ್ನು ಪ್ರತ್ಯೇಕಿಸಿ ಪ್ರತಿ ಕಲಾಕೃತಿಯನ್ನು ವಿಶ್ಲೇಷಣೆಗೆ ಒಳಪಡಿಸಿ ವಿಷಯವಾಗಿ ಚರ್ಚೆಗೆ ಒಳಡಿಸಲಾಗಿದೆ.

**ವರ್ಣಕಲಾಕೃತಿ ಚಿತ್ರಗಳು**

೧. ಜಲವರ್ಣ – ಸಂಯೋಜನೆ

೨. ಜಲವರ್ಣ – ಪ್ರಕೃತಿ ಚಿತ್ರ

೩. ಅಕ್ರಾಲಿಕ್ – ಸಂಯೋಜನೆ

೪. ಪೋಸ್ಟರ್‌ವರ್ಣ – ಸಂಯೋಜನೆ

೫. ಶಾಯಿವರ್ಣ – ಸಂಯೋಜನೆ

೬. ಪೇಸ್ಟಲ್‌ವರ್ಣ – ಸಂಯೋಜನೆ

೭. ತೈಲವರ್ಣ – ಸಂಯೋಜನೆ

೮. ತೈಲವರ್ಣ – ಭಾವಚಿತ್ರ, ವ್ಯಕ್ತಿಚಿತ್ರ

೯. ಗಾಜಿನ ಮಾಧ್ಯಮ – ಸಂಯೋಜನೆ

೧೦. ಮಿಶ್ರ ಮಾಧ್ಯಮ – ಸಂಯೋಜನೆ

೧೧. ಭಿತ್ತಿಚಿತ್ರ ಮತ್ತು ಶಿಲ್ಪಗಳು

ಈ ಮೇಲಿನ ವರ್ಗೀಕರಣದಂತೆ ಕಲಾಕೃತಿಗಳ ಅಧ್ಯಯನವನ್ನು ಈ ಮುಂದೆ ಮಾಡಲಾಗಿದೆ.

## ಜಲವರ್ಣ

ಜಲವರ್ಣ ಚಿತ್ರಗಳನ್ನು ಸಾಮಾನ್ಯವಾಗಿ ಕಾಗದಗಳ ಮೇಲೆ ಕೆಲವು ವೇಳೆ ರೇಷ್ಮೆ ಬಟ್ಟೆ ಚರ್ಮ ಎಲುಬುಗಳ ಮೇಲೆ ಚಿತ್ರಿಸುತ್ತಾರೆ. ಬಣ್ಣಗಳನ್ನು ನೀರಿನಲ್ಲಿ ಮಿಶ್ರಮಾಡಿ ಚಿತ್ರಗಳನ್ನು ಚಿತ್ರಿಸುವುದೇ ಜಲವರ್ಣ ವಿಧಾನ ಬಹುದಿನಗಳಿಂದಲು ರೇಖಾಚಿತ್ರಗಳಿಗೆ ಜಲವರ್ಣಗಳಿಂದ ಮುಕ್ತಾಯ ಸ್ಪರ್ಶಗಳನ್ನು ಕೊಡಲಾಗುತ್ತಿತ್ತೆಂಬುದನ್ನು ಲಿಯೋನಾರ್ಡೋಡಾವಿನ್ಸಿ ಮತ್ತು ಡ್ಯೂಕರ್ ಅವರ ಅಸಂಖ್ಯಾತ ರೇಖಾಚಿತ್ರಗಳಿಂದ ತಿಳಿಯಬಹುದಾಗಿದೆ.

ಈಗಲೂ ಈ ಪದ್ಧತಿಯು ರೂಢಿಯಲ್ಲಿರುತ್ತದೆಯಲ್ಲದೆ ಚಿಕಣಿ ವರ್ಣಚಿತ್ರಗಳನ್ನು ಹೆಚ್ಚಾಗಿ ಜಲವರ್ಣ ಮಾಧ್ಯಮದಲ್ಲಿಯೆ ಚಿತ್ರಿಸಲಾಗುತ್ತದೆ ಎಂಬುದು ತಿಳಿದುಬರುತ್ತದೆ. ಇಂಗ್ಲೆಂಡಿನಲ್ಲಿ ೧೮ನೆಯ ಶತಮಾನದಲ್ಲಿ ಕೊನೆಗೆ ನಿಸರ್ಗದ ದೃಶ್ಯಗಳ ಚಿತ್ರಗಳನ್ನು ಚಿತ್ರಿಸುವ ಕಲಾವಿದರ ತಂಡವೊಂದು ಉದಯಿಸಿತು. ಈ ತಂಡದ ಕಲಾವಿದರೆ ಈ ವಿಧಾನದಲ್ಲಿ ಜ್ಞಾನವಂತರಾದ ಯುರೋಪಿನ್ ವರ್ಣಚಿತ್ರಕಾರರಾಗಿದ್ದಾರೆ ಎನ್ನಬಹುದು. ಜಲವರ್ಣ ಮಾಧ್ಯಮವು ಇನ್ನುಳಿದ ಯಾವುದೇ ಮಾಧ್ಯಮಗಳಿಗಿಂತಲೂ ನಿಸರ್ಗ ಚಿತ್ರಕಲಾ ಕೃತಿಗಳ ರಚನೆಗೆ ಅತ್ಯುತ್ತಮವಾದ ಮಾಧ್ಯಮವಾಗಿದೆಯಲ್ಲದೆ ಬಹು ಕಠಿಣವಾದ ಮಾಧ್ಯಮ ಆಗಿದೆ. ಮಧ್ಯಯುಗದ ಅನೇಕ ಅಲಂಕೃತ ಹಸ್ತಪ್ರತಿಗಳು ಜಲವರ್ಣ ಮಾಧ್ಯಮದಲ್ಲಿಯೆ ರಚಿಸಲ್ಪಟ್ಟಿವೆ. ಫ್ರೆಸ್ಕೋ ವಿಧಾನವು ಜಲವರ್ಣಗಳನ್ನು ಬಳಸಿ ರಚಿಸಿದ ಕಲಾಕೃತಿಗಳಾಗಿವೆ ಎಂಬುದು ಮಾಧ್ಯಮದ ಇನ್ನೊಂದು ಪ್ರತ್ಯೇಕ ರೂಪವಾಗಿದೆ.



ಜಿ.ಆರ್. ಕರ್ಝಿನ್ಸ್, ಥಾಮಸ್‌ಜರ್ಟಿನ್, ಜೆ.ಇಸ್.ಕಾಟ್ಮನ್, ಫೀಟರ್ ಡಿ.ವಿಕೆಟ್ ಮುಂತಾದವರು ಸುಪ್ರಸಿದ್ದ ಜಲವರ್ಣ ಚಿತ್ರಕಾರರಾಗಿದ್ದರು. ಪ್ರಾಯಶಃ ಇವರ ಸಮಕಾಲೀನ ಕಲಾವಿದನಾದ ಜೆ.ಎಮ್.ಡಬ್ಲೂಟರ್ನರ‌ರನ್ನ ಸರ್ವಶ್ರೇಷ್ಠ ನಿಸರ್ಗದೃಶ್ಯ ಚಿತ್ರಕಲಾವಿದನಾಗಿದ್ದನು. ತೈಲವರ್ಣ ಮಾಧ್ಯಮದಲ್ಲಿ ಟರ್ನರನ ಪ್ರತಿಸ್ಪರ್ಧಿಯಾಗಿದ್ದ. ಕಾನ್ಸ್‌ಟೇಬಲನು ಕೆಲವು ಚಿತ್ರಗಳನ್ನು ಜಲವರ್ಣ ಮಾಧ್ಯಮದಲ್ಲಿ ಚಿತ್ರಿಸಿದ್ದಾನೆ. ೧೮೫೧ರಲ್ಲಿ ಟರ್ನರನ ಕಾಲವಾದ ನಂತರ ಜಲವರ್ಣ ಮಾಧ್ಯಮದ ಕಲಾವಿದರಲ್ಲಿ ಸಿಝುನೆಯು ಸುಪ್ರಸಿದ್ಧ ಕಲಾವಿದನೆಂದು ಪರಿಗಣಿಸಲ್ಪಟ್ಟಿದ್ದಾನೆ. ಭಾರತದಲ್ಲಿ ಮೊದಲಿನಿಂದಲೂ ಜಲವರ್ಣಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದೆ. ಗುಹಾಚಿತ್ರಗಳಿಂದ ಹಿಡಿದು ಭಿತ್ತಿಚಿತ್ರಗಳು, ತಾಳೆಯೋಲೆ, ಕಾಗದಗಳ ಮೇಲಿನ ಚಿತ್ರಗಳು.[೩೧]

ಜಲವರ್ಣದಲ್ಲಿಯೇ ರಚಿತವಾಗಿ ಚಿತ್ರಕಲೆಯ ಶಾಸ್ತ್ರಗ್ರಂಥಗಳು, ಜಲವರ್ಣದ ಪುಡಿಗಳನ್ನು ಮಾಡಿಕೊಳ್ಳುವ ಬಗೆಗೆ ಅನೇಕ ವಿಧಾನಗಳನ್ನು ತಿಳಿಸುತ್ತದೆ. ಜಲವರ್ಣದ ಜೊತೆಗೆ ಬೆರೆಸುವ ವಿವಿಧ ಬಗೆಯ ಅಂಟು ಪದಾರ್ಥಗಳ ಬಗ್ಗೆಯೂ ವಿವರಗಳು ದೊರೆಯುತ್ತವೆ.[೩೨] ಜಲವರ್ಣದ ಚಿತ್ರವನ್ನು ಚಿತ್ರಿಸಲು ಬಳಸುವ ಕಾಗದವನ್ನು ಕೈಕಾಗದ (Hand made oapers) ಎಂದು

೩೧. ಕಲಾವಿದರ ಅಭಿಪ್ರಾಯ, ದಿ. ೨೮-೦೭-೨೦೦೩ ಬಾದಾಮಿ
೩೨. ಆರ್.ಸಿ. ಹಿರೇಮಠ. ಬಸವಣ್ಣನವರ ವಚನಗಳು. ಪುಟ:೯೪

ಕರೆಯುವರು. ರದ್ದಿ ಕಾಗದಗಳನ್ನು ಬಹುದಿನಗಳ ಕಾಲ ನೀರಿನಲ್ಲಿ ಹಾಕಿ ಸರಿಯಾಗಿ ನೆನೆಸಿ ನಂತರ ಬೆಣ್ಣೆಯಂತೆ ರುಬ್ಬಿ ಯಂತ್ರದಲ್ಲಿ ಹಚ್ಚೊತ್ತಿ ಕಾಗದವನ್ನಾಗಿ ತಯಾರಿಸಲಾಗುತ್ತದೆ. ನೀರಿನಲ್ಲಿ ನೆನೆದಿರುವುದರಿಂದ ಈ ಕಾಗದ ಜಲವರ್ಣ ಲೇಪನವಾದಾಗ ನೀರನ್ನು ಹೀರಿ ಬಣ್ಣವನ್ನು ಸಹ ಆಳಪದರಗಳಲ್ಲಿ ಇಳಿಸಿಕೊಳ್ಳುತ್ತದೆ. ಹೀಗೆ ಆಳ ಪದರಗಳಲ್ಲಿ ಇಳಿದ ವರ್ಣ ಶಾಶ್ವತವಾಗಿ ಇರುತ್ತದೆಯಲ್ಲದೇ ಜಲವರ್ಣ ಬಹುವರ್ಷಗಳವರೆಗೂ ತನ್ನ ವರ್ಣ ಶ್ರೀಮಂತಿಕೆಯನ್ನು, ಸ್ಥಿರವಾಗಿ ಕಾಪಾಡಿಕೊಂಡು ಬರುತ್ತದೆ.

ಕರ್ನಾಟಕದಲ್ಲಿ ಜಲವರ್ಣದಲ್ಲಿ ಸಿದ್ಧಹಸ್ತರೆನಿಸಿಕೊಂಡು ತ್ರಿಮೂರ್ತಿ ಚನ್ನಬಸಯ್ಯ, ದಿ.ಪಿ.ಆರ್. ತಿಪ್ಪೇಸ್ವಾಮಿ, ಜೆ.ಎಸ್. ಖಂಡೇರಾವ್ ಮುಂತಾದವರು ಕೇವಲ ಪ್ರಕೃತಿ ಚಿತ್ರಗಳನ್ನು ರಚಿಸುತ್ತಿದ್ದರು.

ಜ್ಞಾನೇಶ್ವರ ಅವರು ಕಲಿಕೆಯ ದಿನಗಳಲ್ಲೆ ಪ್ರಕೃತಿ ಚಿತ್ರಣಗಳು, ಭಾವಚಿತ್ರಗಳನ್ನು ಜಲವರ್ಣದಿಂದ ರಚಿಸುತ್ತಿದ್ದರು. ನಂತರ ಜಲವರ್ಣದಲ್ಲಿ ಅನೇಕ ಪ್ರಯೋಗಗಳನ್ನು ಮಾಡುವುದರೊಂದಿಗೆ ಜ್ಞಾನೇಶ್ವರ ಅವರು ಆ ಮೂರ್ತಿ ಕಲಾಕೃತಿಗಳನ್ನು ರಚಿಸಿದ್ದನ್ನು ಇಲ್ಲಿ ಗಮನಿಸಬಹುದಾಗಿದೆ. ತಮ್ಮಲ್ಲಿನ ಸುಪ್ತ ಪ್ರಜ್ಞೆಗೆ ತಕ್ಕಂತೆ ಕಾಗದಗಳನ್ನು ಜೊತೆಗೆ ವರ್ಣಗಳನ್ನು ಬಳಸಿಕೊಂಡಿರುವುದು ಇಲ್ಲಿನ ಕಲಾಕೃತಿಗಳ ತಾಂತ್ರಿಕ ವಿಶಿಷ್ಟ ರಚನಾ ಗುಣಗಳನ್ನು ತಿಳಿದುಕೊಳ್ಳಬಹುದು. ಜ್ಞಾನೇಶ್ವರ ಅವರು ಕೃತಿ ಸಮೂಹವನ್ನು ವಿಷಯ, ಸಂಯೋಜನೆ, ತಂತ್ರಗಾರಿಕೆ ಹಾಗೂ ವರ್ಣ ಮೇಳಗಳನ್ನು ಅಳವಡಿಸಿಕೊಂಡು ಚಿತ್ರ ಈ ಅಧ್ಯಾಯದಲ್ಲಿ ಚರ್ಚೆ ನಡೆಸಲಾಗಿದೆ.

**ಜಲವರ್ಣ ಚಿತ್ರಗಳು**

**೧. ನೃತ್ಯ ಮಾಡುತ್ತಿರುವ ಮಹಿಳೆಯರು**

ಮೂವರು ಮಹಿಳೆಯರನ್ನು ಹೊಂದಿರುವ ಸಂಯೋಜನ ವರ್ಣಚಿತ್ರವಾಗಿದ್ದು. ಮಹಿಳೆಯರು ನೃತ್ಯವನ್ನು ಮಾಡುತ್ತಿರುವುದು ನಾವು ಕಾಣಬಹುದು. ನೆಲದ ಮೇಲೆ ಕುಳಿತ ಭಂಗಿಯು ವಿಶೇಷವಾಗಿದೆ. ನೃತ್ಯ ಮಾಡುವುದರಲ್ಲಿ ಮೂವರು ಮಹಿಳೆಯರು ಭಾವಮಗ್ನವಾಗಿದ್ದಾರೆ ಹಾಗೂ ಅವರು ನೃತ್ಯವನ್ನು ನಮ್ಮ ಸಂಸ್ಕೃತಿಗೆ ಸಂಬಂಧಿಸಿದಂತೆ ನೃತ್ಯವನ್ನು ಮಾಡುತ್ತಿದ್ದಾರೆ. ಅವರ ಹಿಂಭಾಗದಲ್ಲಿ ದೇವಾಲಯದ ಕಟ್ಟಡಗಳನ್ನು ಚಿತ್ರದಲ್ಲಿ ಬಳಸಿಕೊಂಡಿದ್ದಾರೆ. ಹಸಿರು, ಕೆಂಪು, ಹಳದಿ ಬಣ್ಣಗಳನ್ನು ಬಳಸಿಕೊಂಡು ಚಿತ್ರಣವನ್ನು ಪೂರ್ಣಗೊಳಿಸಿದ್ದಾರೆ. ಮಹಿಳೆಯರ ಮೈವಳಿಕೆ ಮತ್ತು ವಸ್ತ್ರವಿನ್ಯಾಸ ಜಲವರ್ಣದಲ್ಲಿಯು ತುಂಬಾ ಒಳ್ಳೆಯ ಕ್ರಿಯಾಶೀಲತೆಯನ್ನು ಬಳಸಿಕೊಂಡಿದ್ದು ಸಂಯೋಜನೆಯೂ ಸಹ ತುಂಬಾ ಚೆನ್ನಾಗಿ ಮೂಡಿಬಂದಿದೆ. ಜ್ಞಾನೇಶ್ವರ ಅವರು ಈ ಚಿತ್ರವನ್ನು ತಮ್ಮದೇ ತಂತ್ರಗಾರಿಕೆ ಮತ್ತು ಶೈಲಿಯಲ್ಲಿ ಚಿತ್ರಿಸಿದ್ದಾರೆ.

**೨. ಶಿವನು ತಾಂಡವವನ್ನು ಆಡುತ್ತಿರುವ ದೃಶ್ಯ**

ಈ ಚಿತ್ರದಲ್ಲಿ ಜ್ಞಾನೇಶ್ವರ ಅವರು ಸಂಯೋಜನೆಯನ್ನು ತುಂಬಾ ಚೆನ್ನಾಗಿ ಕಟ್ಟಿಕೊಟ್ಟಿದ್ದಾರೆ. ಈ ವರ್ಣಚಿತ್ರದಲ್ಲಿ ಶಿವನು ಕೂದಲನ್ನು ಕೆದರಿಕೊಂಡು ತಾಂಡವನ್ನು ಮಾಡುತ್ತಿರುವ ದೃಶ್ಯವಿದಾಗಿದೆ. ಶಿವನು ನಂದಿಯ ಮೇಲೆ ನಿಂತು ಕೈಗಳಲ್ಲಿ ತ್ರಿಶೂಲ, ಪರಶು, ಖಡ್ಗ, ಘಂಟೆ, ಸರ್ಪ, ಈಟಿ ಅಗ್ನಿಯನ್ನು ಹಿಡಿದು ಕೊರಳಿನಲ್ಲಿ ರುಂಡಮಾಲೆಯನ್ನು ಧರಿಸಿಕೊಂಡಿದ್ದಾನೆ. ಜೊತೆಗೆ ಕೃಷ್ಣ, ವಿಷ್ಣು, ವಾಸುದೇವನು, ಗಣಪತಿ, ಬ್ರಹ್ಮ, ಪಾರ್ವತಿದೇವಿ, ಋಷಿಮುನಿಗಳು ಈ ಚಿತ್ರದಲ್ಲಿ ಕಾಣಬಹುದು. ಎಲ್ಲಾ ದೇವಾನುದೇವತೆಗಳು ಶಿವನನ್ನು ಶಾಂತಪಡಿಸಲು ಸಂಗೀತ ವಾದ್ಯಗಳಾದ ತಬಲ, ತಂಬೂರಿ, ವೀಣೆ, ಡೋಲು, ಶಂಕುನಾದ ಎಲ್ಲವನ್ನು ನುಡಿಸುತ್ತಿದ್ದಾರೆ. ಮಕ್ಕಳಾದ ಗಣಪತಿ, ಷಣ್ಮುಖರು ವಾದ್ಯವನ್ನು ನುಡಿಸುತ್ತಿರುವುದನ್ನು ಈ ಚಿತ್ರದಲ್ಲಿ ಕಾಣಬಹುದು. ಈ ವರ್ಣಚಿತ್ರವನ್ನು ಜಲವರ್ಣದಿಂದ ಮಾಡಲಾಗಿದೆ ಹಾಗೂ ತಮ್ಮದೇ ಆದ ತಂತ್ರಗಾರಿಕೆಯನ್ನು ಬಳಸಿ ವಿಶೇಷ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಎಲ್ಲಾ ರೀತಿಯಲ್ಲಿಯು ಈ ಚಿತ್ರದಲ್ಲಿ ಮೂಡಿಬಂದ ದೇವತೆಗಳು ನಿಂತಿರುವ ಭಂಗಿಯು ಬಳಸಿದ ವಸ್ತ್ರವಿನ್ಯಾಸ ತುಂಬಾ ಚೆನ್ನಾಗಿ ಮೂಡಿಬಂದಿದೆ ಎನ್ನಬಹುದು. ಅದೇರೀತಿಯಾಗಿ ಸಂಯೋಜನೆಯು ಅದ್ಭುತವಾಗಿ ಸಂಗಮವಾಗಿದೆ.

**೩. ಗಣಪತಿಯೊಂದಿಗೆ ದೇವತೆಗಳು**

ಚಿತ್ರದಲ್ಲಿ ಅಷ್ಟ ದಿಕ್ಕಿನ ಗಣಪತಿಯ ಸುತ್ತಲೂ ಅಷ್ಟದಿಗ್ಗಪಾಲಕರು ಇರುವುದು ಹಾಗೂ ಈ ಚಿತ್ರಣದಲ್ಲಿ ಗಣಪತಿಯು ವಿಶೇಷ ಬಣ್ಣದಿಂದ ಕಂಗೊಳಿಸುತ್ತಿರುವುದು. ಎಂಟು ಅಷ್ಟದಿಗ್ಗಪಾಲಕರು ಗಣಪತಿಯ ಸುತ್ತಲೂ ಜಿಂಕೆ ಮೇಲೆ ಕೂತಿರುವ ಹಾಗೂ ಎತ್ತಿನ ಮೇಲೆ, ಆನೆಯ ಮೇಲೆ, ಹಂದಿಯ ಮೇಲೆ, ಕುದುರೆಯ ಮೇಲೆ ಹೀಗೆ ಹಲವು ಬಗೆಯ ಪ್ರಾಣಿಗಳ ಮೇಲೆ ಅಷ್ಟದಿಗ್ಗಪಾಲಕರು ಕುಳಿತಿರುವ ಭಂಗಿಯು ತುಂಬಾ ವಿಭಿನ್ನವಾಗಿದೆ. ಪ್ರಮಾಣವು ಸರಿಯಾದ ರೀತಿಯಲ್ಲಿ ಇದ್ದು ಬಣ್ಣಗಾರಿಕೆಯು ವಿಶಿಷ್ಟ ರೀತಿಯಲ್ಲಿ ಹಾಗೂ ನೋಡುಗರಿಗೆ ಆನಂದವನ್ನು ಉಂಟುಮಾಡುವಷ್ಟು ಆಕರ್ಷಕವಾಗಿ ಮೂಡಿಬಂದಿದೆ. ಗಣಪತಿಯ ಸುತ್ತಲು ಬಳಸಲಾದ ಹೂ ಬಳ್ಳಿಯ ವಿನ್ಯಾಸವು ವಿವಿಧ ರೀತಿಯಲ್ಲಿದೆ ಎಂದು ಹೇಳಬಹುದು. ಈ ವರ್ಣಚಿತ್ರವನ್ನು ಜ್ಞಾನೇಶ್ವರ ಅವರು ತಮ್ಮದೆ ಶೈಲಿಯಲ್ಲಿ ಚಿತ್ರಿಸಿದ್ದು ಅವರದೇ ಕಲ್ಪನೆಯಲ್ಲಿ ಮೂಡಿಬಂದ ಕಲಾಕೃತಿ ಇದಾಗಿದೆ.

**೪. ವಿಷ್ಣುವು ಮನಮೋಹಿನಿಯಾದ ದೃಶ್ಯದ ವರ್ಣಚಿತ್ರ**

ಈ ಚಿತ್ರಣವು ವಿಷ್ಣುವು ಮೋಹಿನಿಯಾಗಿ ಪರಿವರ್ತನೆಗೊಂಡು ದೇವಾನುದೇವತೆಗಳಿಗೆ ಹಾಗೂ ರಾಕ್ಷಸರಿಗೆ ಅಮೃತವನ್ನು ಹಂಚಲು ಹಾಕುವ ವೇಶ ಇದಾಗಿದೆ. ಆ ಮನಮೋಹಿನಿಯ ಚಿತ್ರವನ್ನು ಜ್ಞಾನೇಶ್ವರ ಅವರು ತಮ್ಮದೆ ಕಲಾಶೈಲಿಯಲ್ಲಿ ಚಿತ್ರಿಸಿದ್ದಾರೆ. ಮನಮೋಹನಿಯು ಮೋಡಗಳ ಮಧ್ಯದಿಂದ ಅಮೃತ ಕಳಸವನ್ನು ಹೊತ್ತು ಬರುವ ಹಾಗೂ ಮನಮೋಹಿನಿ

ವಿಷ್ಣುವಿನ ಮೈವಳಿಕೆಯು ತುಂಬಾ ಸುಂದರವಾಗಿ ಲಾಲಿತ್ಯತೆ ಮತ್ತು ಕೈಬೆರಳುಗಳು ನೀಳವಾಗಿ ಮೂಡಿಬಂದಿದೆ. ಈ ಚಿತ್ರಣವು ಜಲವರ್ಣದಿಂದ ಚಿತ್ರಿಸಲ್ಪಟ್ಟಿದ್ದು ಒಬ್ಬ ಮಹಿಳೆಯ ಆಕಾರ ಪ್ರಮಾಣಬದ್ಧತೆಯನ್ನು ಸರಿಯಾದ ರೀತಿಯಲ್ಲಿ ಬಳಸಿಕೊಂಡು ಈ ಕಲಾಕೃತಿಯನ್ನು ಪೂರ್ಣಗೊಳಿಸಿದ್ದಾರೆ.

**೫. ಮಹಾಲಕ್ಷ್ಮೀಯ ಚಿತ್ರ : (೨೦x೨೪) ೧೯೮೪**

ಮಹಾಲಕ್ಷ್ಮೀಯ ಚಿತ್ರವಾಗಿದ್ದು ಇದರಲ್ಲಿ ಮಹಾಲಕ್ಷ್ಮೀಯು ೧೮ ಕೈಗಳನ್ನು ಹೊಂದಿದ್ದು ಆ ಕೈಗಳಲ್ಲಿ ಶಂಕು, ಕಪಾಲ, ಬಿಲ್ಲು, ಚಕ್ರ, ಪರಶು, ಈಟಿ, ರುದ್ರಾಕ್ಷಿ, ಗದೆ, ಖಡ್ಗ, ತ್ರಿಶೂಲ, ಕೊಡಲಿ, ಕಮಲ, ಗಂಟೆ, ತೀರ್ಥಪಾತ್ರೆ ಹೀಗೆ ಹಲವು ಅಸ್ತ್ರಗಳನ್ನು ಹಿಡಿದಿರುವುದನ್ನು ಈ ಚಿತ್ರಣದಲ್ಲಿ ಕಾಣಬಹುದು. ಈ ಚಿತ್ರಣದಲ್ಲಿ ಮಹಾಲಕ್ಷ್ಮೀಯ ಶ್ಲೋಕವು ಇರುವುದನ್ನು ಕಾಣಬಹುದು ಹಾಗೂ ಬಣ್ಣಗಾರಿಕೆಯು ವಿಶೇಷ ರೀತಿಯಲ್ಲಿ ಕಲಾವಿದರು ಬಳಸಿಕೊಂಡಿದ್ದಾರೆ. ಈ ಚಿತ್ರಣವನ್ನು ಕಂಡಾಗಲೆ ತಿಳಿದಿದ್ದು ನೋಡುಗರಿಗೆ ವಿಶೇಷವೆನಿಸುತ್ತದೆ ಹಾಗೂ ಜ್ಞಾನೇಶ್ವರ ಅವರ ಕ್ರಿಯಾಶೀಲತೆ ಮತ್ತು ಕಲಾಶೈಲಿ ಹಾಗೂ ತಂತ್ರಗಾರಿಕೆ ಈ ಚಿತ್ರಣದಲ್ಲಿ ನಾವು ಕಾಣಬಹುದಾಗಿದೆ. ವಸ್ತ್ರವಿನ್ಯಾಸವು ಮಹಾಲಕ್ಷ್ಮೀಯು ಕಮಲದ ಮೇಲೆ ಕುಳಿತಿರುವ ಭಂಗಿಯು ತುಂಬಾ ಸುಂದರವಾಗಿ ಚಿತ್ರಿಸಲ್ಪಟ್ಟಿದೆ. ಅದೇ ರೀತಿಯಾಗಿ ಬಣ್ಣದ ಬಳಕೆಯು ತೆಳುವಾಗಿ ಹಾಗೂ ವಿಶೇಷವಾಗಿ ಈ ಕಲಾಕೃತಿಯಲ್ಲಿ ಕಾಣಬಹುದು.

**೬. ರಾಜ-ರಾಣಿ ವಿಶ್ರಾಂತಿಯ ದೃಶ್ಯ**

ಚಿತ್ರಣದಲ್ಲಿ ರಾಜ-ರಾಣಿ ಇಬ್ಬರು ವಿಶ್ರಾಂತಿ ಪಡೆಯುತ್ತಿರುವ ದೃಶ್ಯದ ಚಿತ್ರಣವಾಗಿದೆ. ರಾಜನ ತೊಡೆಯ ಮೇಲೆ ತಲೆ ಇಟ್ಟು ಮಲಗಿರುವ ರಾಣಿಯು ಮತ್ತು ಕುಳಿತಿರುವ ರಾಜನು ಇಬ್ಬರ ಭಂಗಿಯು ತುಂಬಾ ವಿಭಿನ್ನವಾಗಿ ಜ್ಞಾನೇಶ್ವರ ಅವರು ಚಿತ್ರಣವನ್ನು ಚಿತ್ರಿಸಿದ್ದಾರೆ. ಮತ್ತು ಹೆಚ್ಚು ಬಣ್ಣಗಳನ್ನು ಬಳಕೆ ಮಾಡದೆ ಒಂದೆರಡು ಬಣ್ಣಗಳಲ್ಲಿ ಕಲಾಕೃತಿಯನ್ನು ಪೂರ್ಣಗೊಳಿಸಿದ್ದಾರೆ. ಮರದ ಮುಂದೆ ಕುಳಿತ್ತಿದ್ದಾಗ ಮರದ ಬಣ್ಣ ಮತ್ತು ಆ ಚಿತ್ರಣದಲ್ಲಿ ಸಂಯೋಜಿತವಾಗಿರುವ ವ್ಯಕ್ತಿಗಳ ಬಣ್ಣವು ಮತ್ತು ಜ್ಞಾನೇಶ್ವರ ಅವರು ರಚಿಸುವ ಎಲ್ಲ ಚಿತ್ರದಲ್ಲಿಯೂ ಒಂದು ವಿಶೇಷತೆ ಇರುವುದು. ಅದು ಹೇಗೆಂದರೆ ತಮ್ಮದೇ ಶೈಲಿಯನ್ನು ತಮ್ಮ ಒಳಪಡಿಸುವುದು ಹಾಗೂ ಸಂಯೋಜನೆಯನ್ನು ಬಳಸಿಕೊಳ್ಳುವುದು ತುಂಬಾ ಆಕರ್ಷಕವಾಗಿ ಹೊಂದಿಕೊಳ್ಳುತ್ತದೆ. ಅದೇರೀತಿ ವಸ್ತ್ರವಿನ್ಯಾಸವು ಮತ್ತು ಮೈವಳಿಕೆಯು ಪ್ರಮಾಣಬದ್ಧತೆ ಪರಿಪೂರ್ಣವಾಗಿ ಮೂಡಿಬಂದಿದೆ.

**೭. ಶಿವ ಪಾರ್ವತಿಯರು ನೃತ್ಯ ಮಾಡುವ ದೃಶ್ಯ**

ಚಿತ್ರದಲ್ಲಿ ಜ್ಞಾನೇಶ್ವರ ಅವರು ತಮ್ಮ ಸಾಂಪ್ರದಾಯಿಕ ಶೈಲಿಯಲ್ಲಿ ಕಲಾಕೃತಿಗಳನ್ನು ಹೆಚ್ಚು ಇಷ್ಟಪಡುತ್ತಾರೆ. ಮತ್ತು ಅದೇರೀತಿಯಾಗಿ ನಮ್ಮ ಸಾಂಪ್ರದಾಯಿಕ ಸಂಸ್ಕೃತಿಯ ಪ್ರಕಾರತೆ ಕಲಾಕೃತಿಯ ರಚಿಸುತ್ತಾರೆ ಎಂದು ಹೇಳಲಾಗಿದೆ. ಅದೇರೀತಿ ಈ ಚಿತ್ರಣದಲ್ಲಿ ಶಿವ ಪಾರ್ವತಿ

ಇಬ್ಬರು ನೃತ್ಯ ಮಾಡುತ್ತಿದ್ದು, ಪಾರ್ವತಿದೇವಿಯು ಶಿವನನ್ನು ಮೋಹಕ ನೋಟದಿಂದ ನೋಡುತ್ತಿರುವುದು ಈ ಕಲಾಕೃತಿಯನ್ನು ನೋಡುವ ಸಹೃದಯಿಗೆ ರಸಸ್ವಾಧನೆಯನ್ನುಂಟು ಮಾಡುತ್ತದೆ. ಅದೇರೀತಿ ಈ ಚಿತ್ರಣದಲ್ಲಿ ಬಣ್ಣಗಾರಿಕೆ, ವಸ್ತ್ರವಿನ್ಯಾಸ, ಮೈವಳಿಕೆ ಇವೆಲ್ಲವೂ ಹೊಂದಿ ಸರಿಯಾದ ಪ್ರಮಾಣಬದ್ಧತೆಯನ್ನು ಹೊಂದಿದೆ. ಶಿವ ಪಾರ್ವತಿಯ ಕೇಶವಿನ್ಯಾಸವನ್ನು ಜ್ಞಾನೇಶ್ವರ ಅವರು ತಮ್ಮದೇ ಶೈಲಿಯಲ್ಲಿ ಹಾಗೂ ಕ್ರಿಯಾಶೀಲತೆಯನ್ನು ಬಳಸಿಕೊಂಡು ಸಂಯೋಜನೆಯನ್ನು ಸಹ ಒಂದು ಸರಿಯಾದ ರೀತಿಯಲ್ಲಿ ಈ ಕಲಾಕೃತಿಯಲ್ಲಿ ಜೋಡಿಸಿ ಕೊಂಡಿದ್ದಾರೆ ಎಂದು ಹೇಳಬಹುದು.

**೮. ಶಂಕರಾಚಾರ್ಯರ ವ್ಯಕ್ತಿಚಿತ್ರಣ**

ಮನುಷ್ಯನ ಪೂರ್ಣ ಆಕೃತಿಯನ್ನು ವ್ಯಕ್ತಿಚಿತ್ರಣವೆಂದು ಕರೆಯಲಾಗುತ್ತದೆ. ಈ ಚಿತ್ರಣದಲ್ಲಿ ಶಂಕರಾಚಾರ್ಯರ ವ್ಯಕ್ತಿಚಿತ್ರಣವನ್ನು ಚಿತ್ರಿಸಲಾಗಿದೆ. ಹಾಗೂ ಇದನ್ನು ಸಹ ಜಲವರ್ಣವನ್ನು ಬಳಸಿಕೊಂಡು ಈ ಚಿತ್ರಣವನ್ನು ರಚಿಸಿದ್ದಾರೆ. ಈ ಚಿತ್ರದಲ್ಲಿ ಶಂಕರಾಚಾರ್ಯರು ಹುಲಿಯ ಚರ್ಮದ ಮೇಲೆ ಕುಳಿತಿದ್ದು ಹಾಗೂ ಕಣ್ಣಿನ ದೃಷ್ಟಿಯಲ್ಲಿ ದಿವ್ಯಶಕ್ತಿ ಅಡಗಿರುವುದನ್ನು ನಾವು ಈ ಚಿತ್ರಣದಲ್ಲಿ ಕಾಣಬಹುದು. ಅದೇರೀತಿಯಾಗಿ ಪ್ರಕೃತಿಯ ಸೌಂದರ್ಯವನ್ನು ಈ ಕಲಾಕೃತಿಯಲ್ಲಿ ನೋಡಬಹುದು. ಈ ರೀತಿಯಾಗಿ ಜ್ಞಾನೇಶ್ವರ ಅವರು ತಮ್ಮದೇ ಕಲಾಶೈಲಿಯಲ್ಲಿ ಈ ಚಿತ್ರಣವನ್ನು ನೋಡುಗನಲ್ಲಿ ರಸಸ್ವಾದನೆಯನ್ನು ಉಂಟುಮಾಡುವ ಒಂದು ಶಕ್ತಿಯು ಈ ಕಲಾಕೃತಿಯಲ್ಲಿ ಕಾಣಬಹುದು.

**೯. ಸರಸ್ವತಿಯ ವರ್ಣಚಿತ್ರ**

ವಿದ್ಯೆಗೆ ಅಧಿಪತಿಯಾದ ಸರಸ್ವತಿ ದೇವಿಯ ಈ ಚಿತ್ರಣವಿದಾಗಿದ್ದು ಹಂಸದ ಮೇಲೆ ಕುಳಿತಿದ್ದು ಕೈಯಲ್ಲಿ ವೀಣೆಯನ್ನು ಹಿಡಿದಿರುವುದು, ಪಾದವನ್ನು ಎಲೆಯ ಮೇಲೆ ಇಟ್ಟಿರುವುದು ಮುಂದೆ ನೀರು ಹಾಗೂ ಕಮಲದ ಹೂಗಳನ್ನು ತುಂಬಾ ಸುಂದರವಾಗಿ ಕಲಾವಿದ ಸಂಯೋಜನೆ ಮಾಡಿದ್ದಾನೆ. ಇದು ಕೂಡ ಜಲವರ್ಣದ ಚಿತ್ರಣವಾಗಿದೆ. ಅದರಲ್ಲಿ ನೆರಳು ಬೆಳಕು ಅವಶ್ಯಕವಾದ ಬಣ್ಣಗಳನ್ನು ಬಳಸಿಕೊಂಡು ಚಿತ್ರಣವನ್ನು ಒಂದು ಸಣ್ಣ ತಪ್ಪು ಕಾಣಿಸದಂತೆ ರಚಿಸಿದ್ದಾರೆ. ಜೊತೆಗೆ ಸರಸ್ವತಿದೇವಿಯು ಹಂಸದ ಮೇಲೆ ಕುಳಿತಿರುವ ಭಂಗಿಯು ಜ್ಞಾನೇಶ್ವರ ಅವರು ಈ ಚಿತ್ರಣದಲ್ಲಿ ಸಹ ತಮ್ಮದೇ ಅಥ ಕಲಾಶೈಲಿಯಲ್ಲಿ ತಂತ್ರಗಾರಿಕೆಯನ್ನು ಬಳಸಿ ತೆಳುವಾದ ಬಣ್ಣಗಾರಿಕೆ ಹಾಗೂ ವಿವಿಧ ಬಗೆಯ ವಿನ್ಯಾಸಗಳನ್ನು ಬಳಸಿಕೊಂಡು ಕಲಾಕೃತಿಯನ್ನು ಅದ್ಭುತವಾಗಿ ಕಾಣುವಂತೆ ಪೂರ್ಣಗೊಳಿಸಿದ್ದಾರೆ.

**೧೦. ಸಂಯೋಜನ ಚಿತ್ರಣ**

ಈ ಚಿತ್ರಣದಲ್ಲಿ ನಾರಿಯೊಬ್ಬಳು ಕೊಡವನ್ನು ಹೊತ್ತು ಬರುತ್ತಿರುವ ದೃಶ್ಯದ ಚಿತ್ರಣವಿದು. ಅವಳನ್ನು ರಾಜನೊಬ್ಬನು ಅವಳನ್ನು ರಮಿಸುತ್ತ ನಡೆದುಬರುತ್ತಿರುವುದು. ನೋಡುಗನಲ್ಲಿ ಅವರಿಬ್ಬರು ಪ್ರೀತಿಯ ಸಂಭಾಷಣೆಯಲ್ಲಿರುವುದನ್ನು ಗುರುತಿಸುವಷ್ಟು ಈ ಕಲಾಕೃತಿಯಲ್ಲಿ ಕಲಾವಿದ

ಜೀವಂತಿಕೆಯನ್ನು ತುಂಬಿರುವುದು ನಾವು ಕಾಣಬಹುದು. ಅದೇರೀತಿಯಾಗಿ ಜಲವರ್ಣದಿಂದ ಈ ಚಿತ್ರಣವನ್ನು ಚಿತ್ರಿಸಲಾಗಿದೆ. ಕಲಾಕೃತಿಯಲ್ಲಿರುವ ರಾಜ ರಾಣಿಯರ ಮೈವಳಿಕೆಯ ವೇಶಭೂಷಣ, ಕೇಶವಿನ್ಯಾಸ ಎಲ್ಲವೂ ವಿಶೇಷವಾಗಿ ಕಾಣುತ್ತೇವೆ. ಈ ರೀತಿಯ ಒಂದು ಕಲಾಕೃತಿಯನ್ನು ಜ್ಞಾನೇಶ್ವರ ಅವರು ನೋಡುವ ಕಲಾಪ್ರೇಮಿಗಳಿಗೆ ಕೊಡುಗೆಯಾಗಿ ನೀಡಿದ್ದಾರೆ.

**೧೧. ಶಂಕರಾಭರಣ(ಶಿವ) ವರ್ಣಚಿತ್ರ**

ಇದು ಭಾವಚಿತ್ರವಾಗಿದ್ದು ಶಿವನು ತಲೆಯಲ್ಲಿ ಕಿರೀಟ ಮತ್ತು ಅರ್ಧಚಂದ್ರ ಕೊರಳಿನಲ್ಲಿ ಹಾವು, ರುದ್ರಾಕ್ಷಿಮಾಲೆ ಅಲಂಕಾರಕ್ಕೆ ತಕ್ಕಷ್ಟು ಆಭರಣಗಳು, ವಿಶೇಷವಾದ ಮೈಬಣ್ಣ, ಹಣೆಯ ಮೇಲೆ ವಿಭೂತಿ, ಬಿಲ್ಲಿನಂತೆ ಇರುವ ಹುಬ್ಬುಗಳು ಇವೆಲ್ಲವು ಶಿವನ ಭಾವಚಿತ್ರದಲ್ಲಿ ಅಡಕಗೊಂಡಿದೆ. ಅದೇರೀತಿಯಾಗಿ ವಸ್ತ್ರವಿನ್ಯಾಸ ಮತ್ತು ಆಭರಣದಲ್ಲಿ ಬಳಸಿರುವ ವಿವಿಧ ಬಗೆಯ ವಿನ್ಯಾಸಗಳು ಇವನ್ನೆಲ್ಲ ವಿನ್ಯಾಸಗಳೆಲ್ಲ ಜ್ಞಾನೇಶ್ವರ ಅವರು ಜಲವರ್ಣದಿಂದಲೇ ಪೂರ್ಣಗೊಳಿಸಿದ್ದಾರೆ. ಈ ರೀತಿಯ ಭಾವಚಿತ್ರವು ಜಲವರ್ಣದಲ್ಲಿ ಮೂಡಿಬಂದಿರುವುದು ವಿಶೇಷವಾಗಿದೆ.

**೧೨. ಪಂಚಮುಖಿ ಗಣಪತಿಯ ಚಿತ್ರ**

ವಿಶೇಷವಾದ ಪಂಚಮುಖಗಳನ್ನು ಒಳಗೊಂಡಿರುವ ಗಣಪತಿ ಚಿತ್ರಣ ಇದಾಗಿದ್ದು ಗಣಪತಿಯು ನಿಂತಿರುವ ಭಂಗಿಯು ಮತ್ತು ಮುಖಗಳ ವಿನ್ಯಾಸವು ಹೊಟ್ಟೆಯ ಮೇಲೆ ಸುತ್ತಿಕೊಂಡಿರುವ ಹಾವು ಇದನ್ನೆಲ್ಲ ಜಲವರ್ಣವನ್ನು ಬಳಸಿಕೊಂಡು ಕಲಾವಿದರು ಈ ಚಿತ್ರಣವನ್ನು ಒಂದು ಸಾಂಪ್ರದಾಯಿಕ ಹಾಗೂ ಹಿಂದೂ ಸಂಸ್ಕೃತಿಗೆ ಸಂಬಂಧಪಟ್ಟಂತೆ ಚಿತ್ರಿಸಿದ್ದಾರೆ. ಈ ಪಂಚಮುಖಿ ಗಣಪತಿಯು ದಿಕ್ಕುಗಳ ಕಡೆ ಮುಖಮಾಡಿ ನೋಡುತ್ತಿರುವುದು ಇದಕ್ಕೆ ನಮ್ಮ ಪುರಾಣ ಕಾಲದ ... ಈ ರೀತಿಯ ಪಂಚಮುಖಿ ಚಿತ್ರಣವನ್ನು ಕಲಾವಿದ ಜ್ಞಾನೇಶ್ವರ ಅವರು ತಮ್ಮದೇ ಶೈಲಿಯಲ್ಲಿ ರಚಿಸಿದ್ದಾರೆ.

**೧೩. ಕೆರೆಯ ಮುಂದೆ ಕುಳಿತ ಮಹಿಳೆ ಚಿತ್ರ**

ಚಿತ್ರದಲ್ಲಿ ಮಹಿಳೆಯು ಕೆರೆಯಲ್ಲಿ ಅರಳಿರುವ ಕಮಲಗಳನ್ನು ನೋಡುತ್ತ ಹಾಗೂ ಕೈಯಲ್ಲಿ ಒಂದು ಕಮಲವನ್ನು ಹಿಡಿದು ಆ ಹೂವಿನ ಸೌಂಧರ್ಯವನ್ನು ನೋಡುತ್ತಿರುವ ದೃಶ್ಯ ಇದಾಗಿದೆ. ಮಹಿಳೆಯು ಕುಳಿತಿರುವ ಭಂಗಿಯ ಮತ್ತು ವಸ್ತ್ರವಿನ್ಯಾಸವು ವಿಶೇಷವಾಗಿದೆ. ಹಾಗೂ ಮಹಿಳೆಯ ಹಿಂಭಾಗದಲ್ಲಿ ಪ್ರಕೃತಿಯನ್ನು ಆ ಚಿತ್ರಕ್ಕೆ ಹೊಂದುವಂತೆ ಚಿತ್ರಿಸಿರುವುದು ವಿಶೇಷವಾಗಿ ಮೂಡಿಬಂದಿದೆ. ಇದು ಜಲವರ್ಣದ ಕಲಾಕೃತಿಯಾಗಿದೆ. ಸಂಜೆಯ ಸಮಯವನ್ನು ಈ ಚಿತ್ರದಲ್ಲಿ ಸೆರೆಹಿಡಿದಿದ್ದಾರೆ. ಒಟ್ಟಾರೆಯಾಗಿ ಬಣ್ಣ, ರೇಖೆ, ಮೈವಳಿಕೆ, ಆ ಸಂದರ್ಭ ಎಲ್ಲವನ್ನು ಜ್ಞಾನೇಶ್ವರ ಅವರು ಈ ಚಿತ್ರದಲ್ಲಿ ಕಟ್ಟಿಕೊಟ್ಟಿದ್ದಾರೆ.

**೧೪. ಕೃಷ್ಣ ಮತ್ತು ರಾಧೆ ಚಿತ್ರ**

ಈ ಚಿತ್ರದಲ್ಲಿ ಕೃಷ್ಣನು ಕೊಳಲನ್ನು ಓದುತ್ತಿದ್ದು ರಾಧೆಯು ಕೃಷ್ಣನ ತೊಡೆಯ ಮೇಲೆ ಕುಳಿತಿದ್ದಾಳೆ. ಕೃಷ್ಣ ರಾಧೆ ಕುಳಿತಿರುವ ಭಂಗಿ, ಪ್ರಕೃತಿಯ ಸೌಂದರ್ಯ ಹಾಗೂ ನದಿ,

## ತೈಲವರ್ಣ ಚಿತ್ರ

ತೈಲವರ್ಣ ರಚನೆ ಪ್ರಾರಂಭವಾದುದು ಹದಿನೈದನೇ ಶತಮಾನದ ಪ್ರಾರಂಭದಲ್ಲಿ ಕ್ಯಾನ್ವಾಸ್ ಬಟ್ಟೆಯ ಮೇಲೆ ಅಥವಾ ಪ್ಲಾಸ್ಟರ್ ಆಫ್ ಪ್ಯಾರೀಸ್ ಮೇಲೆ ಲೇಪಿಸುತ್ತಿದ್ದರು. ಮೊಟ್ಟೆಯ ಬಿಳಿಯ ಭಾಗದೊಂದಿಗೆ ಬಣ್ಣವನ್ನು ಬೆರೆಸಿ ಕಲಾಕೃತಿಯನ್ನು ರಚಿಸುತ್ತಿದ್ದು, ಇದನ್ನು ಟೆಂಪರ್ ಎಂದು ಕರೆಯುತ್ತಿದ್ದರು. ಇದರ ಮೇಲೆ ಮೆರಗನ್ನುತ್ತಿ ಲೇಪಿಸಿದರೆ ತೈಲವರ್ಣಚಿತ್ರ ಸಿದ್ದವಾಗುತ್ತಿತ್ತು. ೧೯ನೇ ಶತಮಾನದವರೆಗೂ ಚಿತ್ರವನ್ನು ಒಂದು ಬಣ್ಣದಲ್ಲಿ ರಚಿಸಿ ಅದರ ಮೇಲೆ ಪಾರದರ್ಶಕ ಹೊಳಪು ಕೊಡುವ ಬಣ್ಣವನ್ನು ಲೇಪಿಸುತ್ತಿದ್ದರು. ಈ ತಂತ್ರಗಾರಿಕೆಯಿಂದ ಇವರು ರಚಿಸಿ ಕಲಾಕೃತಿಗಳಲ್ಲಿ ನೈಜತೆ ಎದ್ದು ತೋರುತ್ತದೆ.

ತೈಲವರ್ಣ ರಚನೆ ಪ್ರಾರಂಭದಲ್ಲಿ ವರ್ಣದ್ರವ್ಯದ ಪುಡಿಯನ್ನು ಅಮೃತ ಶಿಲೆಯ ಮೇಲೆ ಅರೆದು ಅದಕ್ಕೆ ಸ್ವಲ್ಪ ತೈಲವನ್ನು ಸೇರಿಸಿ, ಬೇಕಾದ ತೈಲವರ್ಣವನ್ನು ತಯಾರಿಸಿಕೊಳ್ಳುತ್ತಿದ್ದರು. ಈಗ ತೈಲವರ್ಣ ಟ್ಯೂಬ್‌ಗಳಲ್ಲಿ ದೊರೆಯುತ್ತದೆ. ಬಣ್ಣವನ್ನು ತೆಳು ಮಾಡಿಕೊಳ್ಳಲು ಟರ್ಪಂಟೈನ್ ಮತ್ತು ನಾಗರಸೆ ತೈಲವನ್ನು ಉಪಯೋಗಿಸಬಹುದು. ಕಲಾವಿದ ತನಗೆ ಬೇಕಾದ ರೀತಿಯಲ್ಲಿ ತೆಳುವಾಗಿ ಪಾರದರ್ಶಕವಾಗಿ ಇಲ್ಲವೆ ಮಂದವಾಗಿಯು ಉಪಯೋಗಿಸಬಹುದು. ತೈಲಚಿತ್ರಗಳು ಬಹಳ ಕಾಲದವರೆಗೂ ಬಳಿಕೆ ಬರುತ್ತದೆ. ಆದರೆ ಇವುಗಳು ಇಂದು ಮಾರುಕಟ್ಟೆಯಲ್ಲ ಸರಳವಾಗಿ ದೊರೆಯುತ್ತವೆ.

ತೈಲಚಿತ್ರಗಳ ಪರಿಚಯ ಭಾರತಕ್ಕೆ ಮಧ್ಯಯುಗದಿಂದಲೇ ಆದಂತೆ ಕಂಡುಬರುತ್ತದೆ. ಮೊಗಲರ ಕಾಲದಲ್ಲಿ ಬಂದ ವಿದೇಶಿ ಪ್ರವಾಸಿಗರು ಅಲ್ಲಿಂದ ತಂದ ಚಿತ್ರಗಳಲ್ಲಿ ತೈಲಚಿತ್ರಗಳೂ ಇದ್ದಿರಬಹುದು. ನಂತರ ಕಾಲದಲ್ಲಿ ಭಾರತದಲ್ಲಿ ವಿದೇಶಿ ಕಲಾವಿದರಲ್ಲಿ ರಾಜಾ ರವಿವರ್ಮನಿಂದ ತೈಲವರ್ಣ ರಚನೆ ವ್ಯಾಪಕವಾಗಿ ಆರಂಭಗೊಂಡಿತೆಂದು ಹೇಳಬಹುದು.[೩೧]

ಜ್ಞಾನೇಶ್ವರ ಅವರು ದಶಕದಿಂದ ಪ್ರಸ್ತುತ ದಶಕದವರೆಗೂ ತೈಲವರ್ಣದ ಕಲಾಕೃತಿ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ವಿಭಿನ್ನ ಶೈಲಿ ಹಾಗೂ ವಿಷಯಗಳಾಧರಿತ ಕಲಾಕೃತಿಗಳು ಸಾಮಾಜಿಕ ಹಿನ್ನೆಲೆಯಲ್ಲಿ ರಚಿತಗೊಂಡಿವೆ. ತೈಲವರ್ಣದಲ್ಲಿ ಜ್ಞಾನೇಶ್ವರ ಅವರು ಆಧುನಿಕ ಸಂವೇದನೆಯ ಸಂಯೋಜನಾ ಕಲಾಕೃತಿಗಳೊಂದಿಗೆ ಭಾವಚಿತ್ರಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ರಚಿಸಿದ್ದಾರೆ. ಇತರ ಮಾಧ್ಯಮಗಳಿಗಿಂತ ತೈಲವರ್ಣದಲ್ಲಿ ಬಹುಸಂಖ್ಯೆಯ ಕಲಾಕೃತಿಗಳು ಸೃಷ್ಟಿಯಾಗಿದ್ದು, ಜ್ಞಾನೇಶ್ವರ ಅವರ ಕಲಾಸೃಷ್ಠಿಯ ಹಲವು ಆಯಾಮಗಳನ್ನು ಹಾಗೂ ದೃಷ್ಟಿಕೋನಗಳನ್ನು ಸ್ಥಾನಿಕವಾಗಿ ಇಲ್ಲಿ ನೋಡಬಹುದಾಗಿದೆ. ಪ್ರತಿ ಕಲಾಕೃತಿಯ ರಚನೆಯ ಹಿನ್ನೆಲೆ ಮತ್ತು ದೃಷ್ಟಿಕೋನಗಳನ್ನು ಜ್ಞಾನೇಶ್ವರ ಅವರು ಹೇಳಿದ್ದಾರೆ. ಈ ಮುಖೇನ ಅವರ ಅಭಿಪ್ರಾಯಗಳೊಂದಿಗೆ ಕಲಾಕೃತಿಗಳನ್ನು ಚರ್ಚೆಯ ಮೂಲಕ ಸ್ಪಷ್ಟಪಡಿಸುವುದರ ಪ್ರಯತ್ನವನ್ನು ತಮ್ಮ ಕಲಾಕೃತಿಯಲ್ಲಿ ಮಾಡಿದ್ದಾರೆ.

**೧. ಬುದ್ಧನೊಂದಿಗೆ ಶಿಷ್ಯರು ವರ್ಣಚಿತ್ರ**

ಈ ಚಿತ್ರಣವು ತೈಲವರ್ಣ ಮಾಧ್ಯಮದಾಗಿದ್ದು ಇದರಲ್ಲಿನ ಸಂಯೋಜನ ಚಿತ್ರಣವು ಬುದ್ಧನು ಬೋದಿ ಮರದ ಕೆಳಗೆ ಕುಳಿತಿದ್ದು ಅವನನ್ನು ನೋಡುತ್ತ ಕುಳಿತಿರುವ ನಾಲ್ಕು ಬಾಲಕರು ಚಿತ್ರಣದಲ್ಲಿ ಕಂಡುಬರುತ್ತಾರೆ. ನೆರಳು-ಬೆಳಕಿನ ಸಂಯೋಜನೆ ವಸ್ತ್ರಗಳ ಮೇಲಿನ ಎಷ್ಟು ನೈಜವಾಗಿ ಮೂಡಿಬಂದಿದೆ ಎಂದರೆ ಈ ಚಿತ್ರಣವನ್ನು ನೋಡಿದರೆ ತಿಳಿಯುತ್ತದೆ. ಅರ್ಧಕಣ್ಣನ್ನು ತೆರೆದ ಬುದ್ಧನ ಮುಖದ ಲಕ್ಷಣವಂತೂ ತುಂಬಾ ಚೆನ್ನಾಗಿ ಚಿತ್ರಿಸಿದ್ದಾರೆ. ಜ್ಞಾನೇಶ್ವರ ಅವರು ಬುದ್ದನ ಪ್ರಜ್ವಲಿಸುವ ಆ ಮುಖದ ತೇಜಸ್ಸು ನೋಡುಗನಲ್ಲಿ ರಸಸ್ಪಂದನೆಯನ್ನು ಮುಡಿಸುತ್ತದೆ. ಜ್ಞಾನೇಶ್ವರ ಅವರು ಜಲವರ್ಣವಷ್ಟೆ ಅಲ್ಲದೆ ತೈಲವರ್ಣದಲ್ಲಿ ಈ ರೀತಿಯ ಒಂದು ಚಿತ್ರಣಗಳನ್ನು ರಚಿಸಿರುವುದನ್ನು ಗಮನಿಸಬಹುದು. ಇವರ ಕಲಾಕೃತಿಗಳ ಬಗ್ಗೆ ಅಧ್ಯಯನ ನಡೆಸುವುದರಿಂದ ತಿಳಿದುಬರುತ್ತದೆ.

**೨. ಭಾವ ಚಿತ್ರಣ ವರ್ಣಚಿತ್ರ**

ಭಾವಚಿತ್ರಣದಲ್ಲಿ ವ್ಯಕ್ತಿಯ ಅರ್ಧಭಾಗವನ್ನು ಚಿತ್ರಿಸುವುದಕ್ಕೆ ಭಾವಚಿತ್ರ ಎಂದು ಕರೆಯುತ್ತೇವೆ. ಈ ಭಾವಚಿತ್ರಣದಲ್ಲಿ ಮುಗಳ್ನಗೆಯನ್ನು ಬೀರುತ್ತಿರುವ ಕೈಯಲ್ಲಿ ಹೂವನ್ನು ಹಿಡಿದಿರುವುದು ಮತ್ತು ಈ ಭಾವಚಿತ್ರದಲ್ಲಿ ಬಣ್ಣಗಾರಿಕೆ ಹಾಗೂ ವಸ್ತ್ರವಿನ್ಯಾಸ ಮುಖದಲ್ಲಿ ನೆರಳು ಬೆಳಕಿನ ಸಂಯೋಜನೆ ಹಾಗೂ ೭೦ರ ವಯಸ್ಸಿನ ವ್ಯಕ್ತಿತ್ವ ಮತ್ತು ಮುಖಭಾವನೆಯನ್ನು ಗಂಭೀರತೆ ಈ ಎಲ್ಲವನ್ನು ಜ್ಞಾನೇಶ್ವರ ಅವರು ಈ ಭಾವಚಿತ್ರದಲ್ಲಿ ಸೆರೆಹಿಡಿದ್ದಾರೆ. ನೈಜರೂಪ ಬರುವಂತೆ ತೈಲವರ್ಣದಿಂದ ವ್ಯಕ್ತಿಚಿತ್ರಣ ಪೂರ್ಣಗೊಳಿಸಿದ್ದಾರೆ.

**೩. ವ್ಯಕ್ತಿಚಿತ್ರಣ ವರ್ಣಚಿತ್ರ**

ಚಿತ್ರದಲ್ಲಿ ಒಬ್ಬ ಸ್ವಾಮೀಜಿಯ ವ್ಯಕ್ತಿಚಿತ್ರಣವಾಗಿದ್ದು, ಇದು ಕೂಡ ತೈಲವರ್ಣದಿಂದ ರಚಿಸಲ್ಪಟ್ಟಿದೆ. ಈ ಚಿತ್ರಣದಲ್ಲಿ ಕುಳಿತಿರುವ ಸ್ವಾಮೀಜಿಯ ಮುಖದಲ್ಲಿ ಮುಗ್ಧತೆ ಹಣೆಯಲ್ಲಿ ವಿಭೂತಿ, ಮೈಮೇಲೆ ಬಿದ್ದ ನೆರಳು ಬೆಳಕಿನ ಸಂಯೋಜನೆ ಹಾಗೂ ಹುಲಿಯ ಚರ್ಮವನ್ನು ಹಾಸನವಾಗಿ ಕುಳಿತಿರುವ ಬಂಗೆಯನ್ನು ಮೈವಳಿಕೆಯ ಈ ಎಲ್ಲವನ್ನು ಜ್ಞಾನೇಶ್ವರ ಅವರು ನೈಜವಾಗಿ ಚಿತ್ರಿಸಿದ್ದು ತಮ್ಮದೇ ತಂತ್ರಗಾರಿಕೆಯನ್ನು ಶೈಲಿಯನ್ನು ಬಳಸಿಕೊಂಡು ವ್ಯಕ್ತಿಚಿತ್ರಣವನ್ನು ಪೂರ್ಣಗೊಳಿಸಿದ್ದಾರೆ.

**೪. ಮಕ್ಕಳು ವರ್ಣಚಿತ್ರ**

ಈ ಚಿತ್ರಣದಲ್ಲಿ ಮಕ್ಕಳು ತುಂಬಾ ಸುಂದರವಾಗಿ ಕಾಣಿಸಿಕೊಳ್ಳುತ್ತಿದ್ದಾರೆ. ಮಕ್ಕಳ ಮುಖದಲ್ಲಿ ಆ ಚೈತನ್ಯ ಹಾಗೂ ಬಟ್ಟೆಯ ಮೇಲೆ ಹಾಕಿರುವ ಬಣ್ಣಗಳು ಬಟ್ಟೆಯಲ್ಲಿಯು ಮಡಚುವಿಕೆ ಇವೆಲ್ಲ ನೈಜವಾಗಿ ಜ್ಞಾನೇಶ್ವರವರು ಚಿತ್ರಣದಲ್ಲಿ ತೋರಿಸಿದ್ದಾರೆ. ಹಾಗೂ ಮಕ್ಕಳ ಮುಖದ ಭಾವನೆಗಳು ಅವರ ಕಣ್ಣುಗಳಲ್ಲಿ ಮತ್ತು ಮುಖದಲ್ಲಿ ನೆರಳು ಬೆಳಕಿನ ಸಂಯೋಜನೆಯು ನೈಜವಾಗಿ ಮುಡಿಬಂದಿದೆ ಮತ್ತು ವಿಶೇಷವಾಗಿದೆ.

**೫. ಬುಡಬುಡಿಕೆಯವನು ವರ್ಣಚಿತ್ರ**

ಈ ಚಿತ್ರವು ವ್ಯಕ್ತಿ ಚಿತ್ರಣವಾಗಿದೆ. ಇದು ಕೂಡ ತೈಲವರ್ಣದಲ್ಲಿ ಮೂಡಿಬಂದ ಒಂದು ಚಿತ್ರವಾಗಿದೆ. ಈ ಚಿತ್ರಣದಲ್ಲಿ ನೈಜವಾದ ಸುಂದರತೆಯು ಮನೆ ಮಾಡಿದೆ. ಆ ವ್ಯಕ್ತಿಯ ಮುಖಭಾವನೆ ಬಣ್ಣದ ಬಳಕೆ ವಸ್ತ್ರದ ವಿನ್ಯಾಸ ಬುಡಬುಡಕೆಯನ್ನು ಕೊರಳಿನಲ್ಲಿ ಹಾಕಿರುವುದು ಹಾಗೂ ಗಂಟೆಯನ್ನು ಸಹ ಹಾಕಿಕೊಂಡಿರುವಂತೆ ಚಿತ್ರಿಸಿದ್ದು ಕಂಡುಬರುತ್ತದೆ ಹಾಗೂ ಈ ಚಿತ್ರಣವನ್ನು ಜ್ಞಾನೇಶ್ವರವರು ತಮ್ಮದೇ ಶೈಲಿಯನ್ನು ಮತ್ತು ಕ್ರಿಯಾಶೀಲತೆಯನ್ನು ಬಳಸಿಕೊಂಡು ಚಿತ್ರಿಸಿದ್ದಾರೆ. ಮತ್ತು ಒಂದು ಚೀಲವನ್ನು ಬಗಲಿಗೆ ಹಾಕಿಕೊಂಡಿರುವುದು ಬಿಳಿವಸ್ತ್ರಧರಿಸಿರುವುದು ಪೇಟವನ್ನು ತಲೆಗೆ ಸುತ್ತಿರುವುದು ಎಲ್ಲವು ವಿಶೇಷವಾಗಿ ಮೂಡಿಬಂದಿದೆ. ಅವಶ್ಯಕತೆ ಇರುವಷ್ಟು ಬಣ್ಣದ ಬಳಕೆಯನ್ನು ಮಾಡಿದ್ದಾರೆ. ಕಲಾಕೃತಿಯನ್ನು ಕಲಾತ್ಮಕ ದೃಷ್ಟಿಯಿಂದ ನೋಡಿ ಆನಂದಿಸುವ ಕಲಾಪ್ರೇಮಿಗಳಿಗೆ ಈ ಕಲಾಕೃತಿ ತೃಪ್ತಿಯನ್ನು ನಿಡುತ್ತದೆ.

**೬. ಮಹಿಳೆಯ ಭಾವಚಿತ್ರ ವರ್ಣಚಿತ್ರ**

ತಲೆಯ ಸೆರಗನ್ನು ಹೊತ್ತ ಮೇಲೆ ಮಹಿಳೆಯ ಚಿತ್ರವಾಗಿದೆ. ಇವಳ ಮೂಗಿನಲ್ಲಿ ನತ್ತು, ಹಸಿರು ಬಣ್ಣದ ಸೀರೆ, ಆಕರ್ಷಕ ಕಣ್ಣುಗಳು, ಚರ್ಮದ ಬಣ್ಣ, ನೆರಳು-ಬೆಳಕಿನ ಸಂಯೋಜನೆ ವಿಶೇಷವಾಗಿದೆ. ಇದು ತೈಲವರ್ಣದಿಂದ ಮಾಡಿದ್ದು, ಮಹಿಳೆಯ ಹಿಂಭಾಗದಲ್ಲಿ ಸರಳ ಬಣ್ಣದ ಬಳಕೆ ಮಾಡಿದ್ದಾರೆ. ಸೀರೆಮಡಿಕೆಯನ್ನು ತುಂಬಾ ಚೆನ್ನಾಗಿ ಚಿತ್ರಿಸಿದ್ದಾರೆ. ಮಹಿಳೆಯ ಮನೋಭಾವ ಮತ್ತು ಗಂಭೀರವಾಗಿ ಕುಳಿತಿರುವ ಭಂಗಿ ಕಪ್ಪು ತಲೆಕೂದಲು ಎಲ್ಲವನ್ನು ನೈಜವಾಗಿ ಚಿತ್ರಿಸಿದ್ದರೆ, ಕ್ರಿಯಾಶೀಲತೆ ಹೆಣ್ಣಿನ ಭಾವನೆಗಳನ್ನು ಈ ಚಿತ್ಕದಲ್ಲಿ ಸೆರೆಹಿಡಿಯುವ ಪ್ರಯತ್ನ ಜ್ಞಾನೇಶ್ವರವರು ಮಾಡಿದ್ದಾರೆ.

**೭. ನೆಹರು ಮತ್ತು ಗಾಂಧಿಜೀ ವರ್ಣಚಿತ್ರ**

ಈ ಚಿತ್ರಣವು ಸಂಯೋಜನಾತ್ಮಕ ತೈಲ ವರ್ಣದ ಚಿತ್ರವಾಗಿದೆ. ನೆಹರು ಅವರು ಮತ್ತು ಗಾಂಧೀಜಿಯುವರು ಇಬ್ಬರು ಕುಳಿತು ಮಾತನಾಡುತ್ತಿರುವ ಒಂದು ದೃಶ್ಯವಾಗಿದೆ. ಸಂಯೋಜನೆಯಲ್ಲಿಯ ಬಣ್ಣದ ಬಳಕೆ, ನೆರಳು-ಬೆಳಕಿನ ವ್ಯತ್ಯಾಸಗಳು ವಸ್ತ್ರವಿನ್ಯಾಸ ಎಲ್ಲಾವು ನೈಜವಾಗಿದೆ, ಇಬ್ಬರು ನಗುತ್ತಾ ಮಾತನಾಡುವುದರಲ್ಲಿ ಮಗ್ನವಾಗಿರುವುದರ ಭಾವನೆಗಳನ್ನು ತುಂಬಾ ಚೆನ್ನಾಗಿ ಮೂಡಿಬರುವಂತೆ ಚಿತ್ರಿಸಿದ್ದಾರೆ. ಕುಳಿತಿರುವ ಭಂಗಿ ಮೈವಳಿಕೆ, ಚರ್ಮದಲ್ಲಿನ ನೆರಳು-ಬೆಳಕು ಎಲ್ಲವು ನೈಜವಾಗಿ ಮೂಡಿಬಂದಿದೆ.

**೮. ಗುನೂಬೆನ್ನಿನ ವ್ಯಕ್ತಿ ವರ್ಣಚಿತ್ರ**

ಚಿತ್ರವು ವ್ಯಕ್ತಿ ಚಿತ್ರಣವಾಗಿದ್ದು ಇದು ಕೂಡಾ ತೈಲವರ್ಣ ಮಾಧ್ಯಮದಿಂದ ಚಿತ್ರಿಸಿದ ಚಿತ್ರವಾಗಿದ್ದು, ಒಬ್ಬ ಗುನೂಬೆನ್ನಿನ ವ್ಯಕ್ತಿಯ ಚಿತ್ರಣವಿದು. ಕಲೆಗೆ ಸುಂದರತೆ ಎನ್ನುವುದು ಮೊದಲಿನಿಂದಲೇ ಇದೆ. ಅದು ಮುಟ್ಟಲು, ನೋಡಲು ಭಯ ಎನಿಸಿದರೂ ಒಬ್ಬ ಕಲಾವಿದ

ಮಾತ್ರ ಅದರ ನೈಜ ಸೌಂದರ್ಯವನ್ನು ತನ್ನ ಚಿತ್ರಣದಲ್ಲಿ ತೋರಿಸುತ್ತಾನೆ. ಈ ವ್ಯಕ್ತಿ ಚಿತ್ರಣವು ಹಾಗೆ ಗುನೂಬೆನ್ನು ಇದ್ದರೂ ಸಹ ವಿಶೇಷವೆನ್ನಿಸುವ ಚಿತ್ರಣವಾಗಿದೆ. ವ್ಯಕ್ತಿಯ ಕೈಯಲ್ಲಿ ಕೋಲನ್ನು ತಲೆಗೆ ಪೇಟವನ್ನು ಸುತ್ತಿ ಬಿಳಿ ಪಂಚೆಯನ್ನು ಹಾಕಿಕೊಂಡಿದ್ದಾನೆ. ನೆರಳು-ಬೆಳಕಿನ ಸಂಯೋಜನೆಯನ್ನು ವಿಶೇಷವಾಗಿ ಸೆರೆಹಿಡಿದಿದ್ದಾರೆ. ಆ ಸೋಂಕು ಮೈಚರ್ಮ ಮೈಬೆನ್ನಿನ ಮೂಳೆಗಳು ಒಂದು ತೋರಿಕೆ ಎಲ್ಲವು ಅದ್ಭುತವಾಗಿ ಮೂಡಿಬಂದಿರುವುದು ಈ ಚಿತ್ರಣದಲ್ಲಿ ನಾವು ಕಾಣಬಹುದು.

**೯. ಭಾವಚಿತ್ರ ವರ್ಣಚಿತ್ರ**

೭೫ ವಯಸ್ಸಿನ ಚಿತ್ರ ವ್ಯಕ್ತಿಯ ಭಾವ ಚಿತ್ರಣವಾಗಿದ್ದು ಮುಖದ ಗಂಭೀರವಾದ_ಅವರ ಭಾವನೆಯ ಮತ್ತು ಸೊಕ್ಕುಗಟ್ಟಿದ ಚರ್ಮದ ಮೈಬಣ್ಣ, ಬಿಳಿ ಜೂಜ್ಜು, ಕಣ್ಣಿಗೆ ಕನ್ನಡಕ, ಮುಖಕ್ಕೆ ಬಳಸಿದ ಬಣ್ಣಗಳು ವಿಶೇಷವಾಗಿವೆ. ನೆರಳು-ಬೆಳಕು ಎಲ್ಲವು ತುಂಬಾ ಅದ್ಭುತವಾಗಿ ಮೂಡಿಬಂದಿದೆ. ನೋಡಿದ ತಕ್ಷಣ ಮಯಸ್ಸಿನ ಮಿತಿ ಮುಖದ ಭಾವನೆ ಎಲ್ಲವು ಈ ಚಿತ್ರಣದಲ್ಲಿ ಕಂಡುಬರುತ್ತದೆ. ಈ ಚಿತ್ರಣವು ತೈಲವರ್ಣ ಮಾಧ್ಯಮದಲ್ಲಿ ಮೂಡಿ ಬಂದ ಕಲಾಕೃತಿಯಾಗಿದೆ.

**೧೦. ಜ್ಞಾನೇಶ್ವರ ಅವರ ತಾತ ಪರಸಪ್ಪರ ಭಾವಚಿತ್ರ**

ಈ ಚಿತ್ರಣದಲ್ಲಿ ಇರುವ ವ್ಯಕ್ತಿಯು ಜ್ಞಾನೇಶ್ವರ ಅವರ ತಾತ ಪರಸಪ್ಪ. ತೈಲವರ್ಣ ಮಾಧ್ಯಮದಿಂದ ಚಿತ್ರಿಸಿದ್ದು. ತಲೆಗೆ ಪೇಟ, ಕೋಟು, ಶಲ್ಯ, ಕಿವಿಗೆ ಓಲೆ, ಬಿಳಿಗಡ್ಡ ಮುಗ್ಧವಾದ ಕಣ್ಣುಗಳು ಮುಖದಲ್ಲಿ ನೆರಳು-ಬೆಳಕು ಸಂಯೋಜನೆ, ಮೈವಳಿಕೆ, ಹಣೆಯ ಮೇಲೆ ಸುಕ್ಕುಗಡ್ಡಿರುವುದು. ವ್ಯಕ್ತಿಯ ಹಿಂಭಾಗ ಸರಳವಾದ ಬಣ್ಣದ ಬಳಕೆ, ನೈಜವಾದ ಕ್ರಿಯಾಶೀಲತೆಯ ರಚನೆ ಎಲ್ಲವು ಈ ಚಿತ್ರಣದಲ್ಲಿ ಕಂಡುಬರುತ್ತದೆ. ಜ್ಞಾನೇಶ್ವರ ಅವರ ಎಲ್ಲ ಕಲಾಕೃತಿಗಳು ಎಷ್ಟು ಅಮೂಲ್ಯವಾದ ಕೆಲಸದಿಂದ ಪೂರ್ಣಗೊಂಡಿದೆ ಎಂಬುದನ್ನು ಚಿತ್ರಕಲಾಕೃತಿಯಿಂದ ತಿಳಿದುಬರುತ್ತದೆ.

**೧೧. ಹುಡುಗಿಯ ಭಾವಚಿತ್ರ**

ಇದು ಕೂಡ ತೈಲವರ್ಣದ ಚಿತ್ರವಾಗಿದ್ದು. ೧೫ನೇ ವಯಸ್ಸಿನ ಹುಡುಗಿಯ ಭಾವಚಿತ್ರವಾಗಿದೆ. ಮುಖದಲ್ಲಿ ಬಣ್ಣದ ಬಳಕೆ ಮತ್ತು ನೆರಳು-ಬೆಳಕಿನ ಸಂಯೋಜನೆ, ಉಬ್ಬು, ತಗ್ಗು, ಎರಡು ಜಡೆಗಳು, ಕಣ್ಣುಗಳು, ವಸ್ತ್ರವಿನ್ಯಾಸ ಅವಶ್ಯಕವಾದ ಬಣ್ಣದ ಬಳಕೆ, ಮುಗ್ಧ ಮುಖ ಎಲ್ಲವು ನೈಜವಾಗಿ ಮೂಡಿಬಂದಿದೆ. ಕೇಸರಿ ಮತ್ತು ಬೂದು ಬಣ್ಣವು ಹೆಚ್ಚು ಬಳಕೆಯಾಗಿದೆ. ಜ್ಞಾನೇಶ್ವರ ಚಿತ್ರಬಿಡಿಸುವಾಗ ನೈಜಸೌಂದರ್ಯವನ್ನು ಸೆರೆಹಿಡಿಯುವುದು ಅವರ ಕಲಾಶೈಲಿಯಾಗಿದೆ ಎಂಬುದನ್ನು ತೋರಿಸಿಕೊಡುತ್ತದೆ.

**೧೨. ವಯಸ್ಸಾದ ವ್ಯಕ್ತಿಯ ಭಾವಚಿತ್ರ**

ಈ ಚಿತ್ರದಲ್ಲಿ ಮುಖದಲ್ಲಿ ಮುಗ್ಧ ನಗೆಯು, ನೆರಳು-ಬೆಳಕು, ಹುಬ್ಬು- ತಗ್ಗು, ಬಿಳಿಕೂದಲು, ಬಟ್ಟೆಯ ಬಣ್ಣ, ಸುಕ್ಕು ಗಟ್ಟಿದ ಚರ್ಮ ಗಂಭೀರವಾದ ನೋಟ ಎಲ್ಲಾ ಭಾವಚಿತ್ರಣದಲ್ಲಿ ಸೆರೆ

ಹಿಡಿದಿದ್ದಾರೆ. ಆಕಾರ ಕಪ್ಪು, ಬಿಳಿ ಬಣ್ಣದ ಬಳಕೆಯಾಗಿದೆ. ಈ ಭಾವಚಿತ್ರದಲ್ಲಿ ಪ್ರಮಾಣ ಬದ್ಧತೆಯು ಎಲ್ಲವು ಉತ್ತಮರೀತಿಯಲ್ಲದ್ದು ತುಂಬ ಉತ್ತಮ ರೀತಿಯ ಭಾವಚಿತ್ರವೆಂದು ತಿಳಿದುಬರುತ್ತದೆ.

**ಆಧುನಿಕ ಭಿತ್ತಿಚಿತ್ರಕಲೆ**

ಭಿತ್ತಿಚಿತ್ರಕಲೆ ಎಂದರೆ ಗೋಡೆಯ ಮೇಲೆ ಚಿತ್ರಿಸುವ ಕಲೆಯನ್ನು ಭಿತ್ತಿ ಚಿತ್ರಕಲೆ ಎಂದು ಕರೆಯುತ್ತಾರೆ. ಈ ಭಿತ್ತಿ ಚಿತ್ರಕಲೆಯು ನಮಗೆ ನಮ್ಮ ಆದಿಮಾನವರ ಕಾಲದಿಂದ ತಿಳಿದುಬಂದ ಒಂದು ಕಲೆ ಎಂದರೆ ತಪ್ಪಿಲ್ಲ. ಆದಿಮಾನವರು ತಾವು ಇರುವ ಗುಹೆಗಳಲ್ಲಿ ತಮ್ಮ ಸಂತೋಷ-ದುಃಖ ಮತ್ತು ಭೇಟಿಯಾಡುವ ದೃಶ್ಯಗಳನ್ನು ಗುಹೆಯ ಬಂಡೆಗಳ ಮೇಲೆ ಚಿತ್ರಿಸುತ್ತಿದ್ದರು. ಇವೇ ಭಿತ್ತಿಚಿತ್ರಗಳಾಗಿವೆ.

ಅದೇರೀತಿಯಾಗಿ ಕಾಲ ಬದಲಾದಂತೆ ಮಾನವನು ಜಗತ್ತಿನಲ್ಲಿ ಬೆಳೆಯುವ ವಿದ್ಯಾಮಾನದ ಜೊತೆಗೆ ಭಿತ್ತಿಚಿತ್ರಗಳನ್ನು ಸಹ ಆಧುನಿಕ ಭಿತ್ತಿಚಿತ್ರಗಳಾಗಿ ಮಾರ್ಪಾಡಿಸುವುದನ್ನು ಕಾಣಬಹುದಾಗಿದೆ. ಅದೇ ರೀತಿಯಾಗಿ ಜ್ಞಾನೇಶ್ವರ ಅವರು ಸಹ ಆಧುನಿಕ ಭಿತ್ತಿಚಿತ್ರಗಳನ್ನು ಮಾಡಿರುವುದನ್ನು ಕಾಣಬಹುದು. ಅವುಗಳು ಈ ರೀತಿ ಇವೆ.

**೧. ಸೀತಾರಾಮ ಆಧುನಿಕ ಭಿತ್ತಿಚಿತ್ರ**

ಈ ಭಿತ್ತಿಚಿತ್ರದಲ್ಲಿ ರಾಮಸೀತೆಯನ್ನು ರಚಿಸಿದ್ದಾರೆ. ಸಿಮೆಂಟ್ ಮತ್ತು ಜಲ್ಲಿಕಲ್ಲನ್ನು ಬಳಸಿಕೊಂಡು ಮತ್ತು ಮೊದಲು ಗೋಡೆಯ ಮೇಲೆ ರೇಖಾಚಿತ್ರವನ್ನು ಚಿತ್ರಿಸಿಕೊಂಡು ನಂತರ ಅದರ ಮೇಲೆ ಜಿಲ್ಲಿ, ಸಿಮೆಂಟ್ ಎರಡನ್ನು ಬೆರೆಸಿ ನಂತರ ಕಲಾಕೃತಿ ರಚನೆಯನ್ನು ಮಾಡಿದ್ದಾರೆ. ನಂತರ ಅದರ ಮೇಲೆ ತೈಲವರ್ಣಗಳನ್ನು ಬಳಸಿಕೊಂಡು ಭಿತ್ತಿಚಿತ್ರವನ್ನು ಪೂರ್ಣಗೊಳಿಸಿದ್ದಾರೆ. ಆ ಭಿತ್ತಿಚಿತ್ರದಲ್ಲಿ ಮೂಡಿಬಂದಿರುವ ರಾಮ ಸೀತಾ ಆಕೃತಿಗಳ ಮೈವಳಿಕೆಗೆ ಅಳತೆ, ಉಬ್ಬು, ತಗ್ಗು ಎಲ್ಲಾ ಒಂದು ಸರಿಯಾದ ಪ್ರಮಾಣದಲ್ಲಿ ಮೂಡಿಬಂದಿದೆ.

**೨. ಶಂಕರಾಚಾರ್ಯರ ಜೀವನದ ಸನ್ನಿವೇಶದ ದೃಶ್ಯ ಆಧುನಿಕ ಭಿತ್ತಿಚಿತ್ರ**

ಶಂಕರಾಚಾರ್ಯರ ಜೀವನಾದ ಒಂದು ದೃಶ್ಯ ಇದಾಗಿದ್ದು, ಇದನ್ನು ಸಿಮೆಂಟ್‌ಗೆ ಮತ್ತು ಕಲ್ಲು, ಟೈಲ್ಸ್ ಪೀಸ್‌ಗಳ ಬಳಕೆಯಿಂದ ಮೂಡಿರುವುದು. ಈ ಭಿತ್ತಿಚಿತ್ರದಲ್ಲೂ ಸಹ ತೈಲವರ್ಣವನ್ನು ಬಳಸಿ ಚಿತ್ರವನ್ನು ಪೂರ್ಣಗೊಳಿಸಿದ್ದಾರೆ. ಹಾಗೂ ಉಬ್ಬು ತಗ್ಗು ಮೈವಳಿಕೆ ಪ್ರಮಾಣಬದ್ಧತೆ ಎಲ್ಲಾ ಒಂದು ವಿಶೇಷ ಶೈಲಿಯಲ್ಲಿ ಮೂಡಿಬಂದಿದೆ ಎನ್ನಬಹುದು. ಇದೇ ರೀತಿಯ ಭಿತ್ತಿಚಿತ್ರಗಳನ್ನು ಇನ್ನು ಅನೇಕ ಕಡೆ ರಚಿಸಿರುವ ಜ್ಞಾನೇಶ್ವರ ಅವರು ತಮ್ಮದೇ ಶೈಲಿ- ತಂತ್ರಗಾರಿಕೆಯನ್ನು ಬಳಸಿ ಭಿತ್ತಿಚಿತ್ರಗಳನ್ನು ರಚನೆ ಮಾಡುವುದು ಮತ್ತು ಹೆಚ್ಚಿನ ರೀತಿಯ ಭಿತ್ತಿಚಿತ್ರಗಳನ್ನು ಮಾಡುವ ಆಸೆಯನ್ನು ಸಹ ಇವರು ಹೊಂದಿದ್ದಾರೆ ಎಂದು ಈ ಅಧ್ಯಯನದ ಮೂಲಕ ತಿಳಿಸಬಹುದಾಗಿದೆ.

**ಶಿಲ್ಪಕಲೆ**

ಶಿಲ್ಪ ರಚನೆಗಳು ಸಾವಿರಾರು ವರ್ಷಗಳ ಹಿಂದಿನಿಂದ ರಚನೆಯಾಗುತ್ತ ಬಂದಿವೆ. ಶಿಲ್ಪ ಎಂದರೇನು? ಜಡ ವಸ್ತುವಿನಲ್ಲಿ ವಾಸ್ತವಿಕ ಅಥವಾ ಕಾಲ್ಪನಿಕ ಆಕೃತಿಯೊಂದನ್ನು ರೂಪಿಸುವುದನ್ನು ಶಿಲ್ಪ ಎಂದು ಕರೆಯಬಹುದಾಗಿದೆ.

ಚಿತ್ರಕ್ಕಿಂತ ಶಿಲ್ಪ ವಿಭಿನ್ನವಾದುದು. ಚಿತ್ರ ದ್ವಿಮಾನವುಳ್ಳದ್ದಾಗಿದ್ದರೆ ಶಿಲ್ಪ ತ್ರಿಮಾನವುಳ್ಳದ್ದಾಗಿದೆ. ಉದ್ದ, ಅಗಲ ಮತ್ತು ದಪ್ಪಗಳ ಮೂರು ಮಾನಗಳನ್ನು ಶಿಲ್ಪ ಸಿದ್ಧವಾಗುತ್ತದೆ. ಪ್ರಸ್ತುತ ಸಮಕಾಲೀನ ಸಂರ್ಭದಲ್ಲಿ ಹಲವಾರು ನವೀನ ಮಾಧ್ಯಮಗಳ ಲಭ್ಯವಾಗಿರುತ್ತವೆ. ಹಿನ್ನಲೆಯಲ್ಲಿ ಶಿಲ್ಪ ರಚನೆ ತನ್ನ ಒಳಸ್ವರೂಪಗಳನ್ನು ಬದಲಿಸಿಕೊಳ್ಳುತ್ತದೆ. ಈ ಮೊದಲು ಶಿಲ್ಪರಚನೆಗೆ ಸಾಂಪ್ರದಾಯಿಕವಾಗಿ ಮರ, ಶಿಲೆ, ಜೇಡಿಮಣ್ಣನ್ನು ಬಳಸುತ್ತಿದ್ದರು. ಕ್ರಮೇಣ ವೈಜ್ಞಾನಿಕ ಆವಿಷ್ಕಾರಗಳು ಕಲಾಕ್ಷೇತ್ರದಲ್ಲಿ ಹೆಚ್ಚು ತಂದಿರುವುದರಿಂದ ಇದೀಗ ಹಲವಾರು ಮಾಧ್ಯಮಗಳು ಶಿಲ್ಪ ರಚನೆಯಲ್ಲಿ ಪ್ರಾಧಾನ್ಯತೆಯನ್ನು ಪಡೆದಿವೆ. ಪ್ಲಾಸ್ಟರ್ ಆಫ್ ಪ್ಯಾರಿಸ್. ಫೈಬರ್ ಗ್ಲಾಸ್, ಕಬ್ಬಿಣ, ಕಂಚು, ಪ್ಲಾಸ್ಟಿಕ್ ಇನ್ನೂ ಮುಂತಾದ ಬಹುಪಯೋಗಿ ಮಾಧ್ಯಮಗಳು ನವ್ಯ ಶಿಲ್ಪದ ರೂಪದಲ್ಲಿ ಕಾಣಿಸಿಕೊಳ್ಳುತ್ತಿವೆ. ಪ್ರತಿಮೆಗೂ ಸೃಜನಶೀಲ ಶಿಲ್ಪಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಯಾವುದೆ ಆಕೃತಿಯನ್ನು ಯಥಾವತ್ತಾಗಿ ಅನುಕರಿಸಿದರೆ ಅಥವಾ ನಕಲೀಕರಿಸಿದರೆ ಅದಕ್ಕೆ ಪ್ರತಿಮೆ ಎಂದು ಕರೆಯುತ್ತಾರೆ. ಸೃಜನಶೀಲ ಶಿಲ್ಪದಲ್ಲಿ ವಾಸ್ತವ ಬದುಕಿನ ತುಡಿತಗಳು ಅವುಗಳ ಕಲ್ಪನೆಗಳ ಮೂಡುವಿಕೆಯ ಪ್ರಧಾನವಾಗಿದ್ದು ಯಾವುದೇ ಆಕೃತಿಯ ನಕಲಿಕರಿಸುವ ಸಾಧ್ಯತೆಗಳು ಇಲ್ಲಿರುವುದಿಲ್ಲ.

ಪ್ರಸ್ತುತ ಸಂದರ್ಭದಲ್ಲಿ ನವ್ಯ ಶೈಲಿಯ ಬಹುಸಂಖ್ಯೆಯ ಶಿಲ್ಪಗಳಿಂದ ರಚಿತವಾಗಿ ವರ್ಣಚಿತ್ರಗಳಿಗೆ ತೀವ್ರ ಸ್ಪರ್ಧೆಯನ್ನು ಒಡ್ಡುತ್ತಿವೆ ಜ್ಞಾನೇಶ್ವರ ಅವರು ಬಾಲ್ಯದಲ್ಲೆ ಶಿಲ್ಪಗಳನ್ನು ರಚಿಸುತ್ತಿದ್ದರು. ಅವರ ಮೂತ್ತಾತ ತಿಪ್ಪಾಜಿಯವರ ಜೊತೆಯಲ್ಲಿ ಶಿಲ್ಪ ರಚನೆಯನ್ನು ಹೇಗೆ ಮಾಡುವುದು ಎಂಬುದನ್ನು ತಿಳಿದ್ದಿದರು. ನಂತರ ಅಣ್ಣ ಕಾಶಿನಾಥ ಜೊತೆಗೆ ಸೇರಿ ಶಿಲ್ಪ ರಚನೆಯನ್ನು ಕಲಿತರು. ಗಣಪತಿ, ಸರಸ್ವತಿ ಮತ್ತು ಸಾಂಪ್ರದಾಯಿಕ ಪದ್ಧತಿಯಲ್ಲಿ ಶಿಲ್ಪ ರಚನೆ ಮಾಡುತ್ತಿದ್ದರು. ಕಲ್ಲು-ಮಣ್ಣು ಪ್ಲಾಸ್ಟರ್ ಆಫ್ ಪ್ಯಾರಿಸ್ ಫೈಬರ್ ಇವುಗಳು ಜ್ಞಾನೇಶ್ವರ ಅವರು ರಚಿಸಿದ್ದ ಮಾಧ್ಯಮಗಳು ತುಂಬ ವಿಶೇಷವಾಗಿ ಶಿಲ್ಪ ರಚನೆಯನ್ನು ಮೂಡಿದ್ದರು. ಅವುಗಳಲ್ಲಿ ಆಯ್ದ ಶಿಲ್ಪಗಳನ್ನು ವಿಶ್ಲೇಷಿಸಲಾಗಿದೆ.

**೧. ಶಿಲ್ಪ ಕಲಾಕೃತಿಗಳು**

ಚಂದ್ರಭಾರತಿ ಆಚಾರ್ಯ ಅವರು ಶಿಲ್ಪಕಲಾ ಕೃತಿಯ ೩೫ಅಡಿಯ ಶಿಲ್ಪಕಲಾ ಕೃತಿಯಾಗಿದ್ದು ಮಂಡಿಯನ್ನು ಮಡಿಚಿ ಹುಲಿಯ ಚರ್ಮದ ಮೇಲೆ ಕುಳಿತಿರುವ ಭಂಗಿಯ ಕಲಾಕೃತಿಯಾಗಿದ್ದು, ಗಂಭೀರವಾದ ನೋಟ ಕೊರಳಿನಲ್ಲಿ ರುದ್ರಾಕ್ಷಿಮಾಲೆ ಬಿಳಿ ಪಂಚೆಯ ವಸ್ತ್ರಾಭರಣ. ಸಿಮೆಂಟಿನಿಂದ ಮಾಡಿದ ಕಲಾಕೃತಿ ಇದು ಶೃಂಗೇರಿ ಮಠದಲ್ಲಿದೆ. ಇದನ್ನು ನೈಜವಾಗಿ ಜ್ಞಾನೇಶ್ವರವರು

ತಮ್ಮದೇ ಆದ ಕಲಾಶೈಲಿಯಲ್ಲಿ ನಿರ್ಮಿಸಿದ್ದಾರೆ. ಹಾಗೂ ಸಿಮೆಂಟಿನಿಂದ ನಯವಾದ ಕೃತಿಗಳನ್ನು ರಚಿಸುವ ಶಕ್ತಿ ಮತ್ತು ನೈಪುಣ್ಯ ಜ್ಞಾನೇಶ್ವರ ಅವರಿಗೆ ಮೊದಲಿನಿಂದಲೇ ಇದೆ ಎಂದು ಹೇಳಬಹುದು.

**೨. ಶನಿ ಮಹಾತ್ಮ: ಶಿಲ್ಪ**

ಈ ಕಲಾಕೃತಿಯು ಶನಿ ಮಹತ್ಮನ ಶಿಲ್ಪವಾಗಿದ್ದು, ಇದನ್ನು ಮೈಸೂರಿನ ಬಿಳಿ ಕಲ್ಲಿನಲ್ಲಿ ಕೆತ್ತಿಸಿದ್ದಾರೆ. ತುಂಬಾ ಕಷ್ಟಕರವಾದ ಕೆಲಸವಾಗಿದ್ದು ನೈಜವಾದ ಕಲಾಶೈಲಿಯನ್ನು ಹೊಂದಿರುವ ಶಿಲ್ಪ ಇದಾಗಿದೆ. ನಿರಂತರ ಶನಿ ಮಹಾತ್ಮನ ಶಿಲ್ಪ ಹಿಂಭಾಗದಲ್ಲಿ ಕಾಗೆಯ ಕೈಯಲ್ಲಿ ಬಾಣವು ಅವಶ್ಯಕವಿರುವಷ್ಟು ಶಿಲ್ಪಕ್ಕೆ ಆಭರಣವನ್ನು ಹಾಗೂ ವಸ್ತ್ರವಿನ್ಯಾಸವು ಹೊಯ್ಸಳ ಶಿಲ್ಪದಲ್ಲಿಯೆ ವಿನ್ಯಾಸದ ಲಕ್ಷಣಗಳನ್ನು ಈ ಶಿಲ್ಪದ ಕೆತ್ತನೆಯಲ್ಲಿ ಕಾಣಬಹುದಾಗಿದೆ. ಒಟ್ಟಾರೆ ಹೇಳಬೇಕೆಂದರೆ ಕೆತ್ತಲು ಕಷ್ಟವಾಗಿರುವ ಬಿಳಿ ಕಲ್ಲಿನಲ್ಲಿ ಅಮೂಲ್ಯವಾದ ಶಿಲ್ಪ ಕಲಾಕೃತಿಯನ್ನು ಜ್ಞಾನೇಶ್ವರ ಅವರು ಕೆತ್ತಿರುವುದು ವಿಶೇಷವಾಗಿದೆ. ಹಾಗೂ ಒಂದು ಸುಂದರವಾದ ಕಲಾಕೃತಿಯನ್ನು ಈ ರೀತಿಯಾಗಿ ಪೂರ್ಣಗೊಳಿಸಲಾಗಿದೆ. ನೋಡಿಗನಲ್ಲಿ ಆಶೀರ್ವಾದವನ್ನು ಉಂಟುಮಾಡುವ ಕಲಾಕೃತಿಯು ಇದಾಗಿದೆ ಎಂದರೆ ತಪ್ಪಿಲ್ಲ.

**೩. ಪಂಚಮುಖ ಗಣೇಶ ಶಿಲ್ಪ**

೧೮ ಅಡಿಗಳ ಶಿಲ್ಪವಾಗಿದ್ದು, ಇದು ಸಹ ಮೈಸೂರಿನ ಬಿಳಿಕಲ್ಲು ಬಿಳಿಕಲ್ಲಿನಲ್ಲಿ ಕೆತ್ತಲಾಗಿದೆ. ದಿಕ್ಕಿನೆಡೆಗೆ ಮುಖ ಮಾಡಿರುವ ಪಂಚಮುಖದ ಗಣಪತಿ ಇದು ಬಲಗೈಯಲ್ಲಿ ಖಡ್ಗ ಅದರ ಶಂಕು ತ್ರಿಶೂಲ, ಎಡಗೈಯಲ್ಲಿ ಗದೆ, ಅದರ ಮೇಲ್ಗೈಯಲ್ಲಿ ಹಾವು ಗಣಪತಿಯ ಅಕ್ಕ ಪಕ್ಕದಲ್ಲಿ ನರ್ತಕಿಯರು, ಐದು ತಲೆಗಳಲ್ಲಿ ಕಿರೀಟಗಳು ಗಣಪತಿಯ ಕಾಲಿನ ಕೆಳಗೆ ಇಲ್ಲಿಯ ಉಬ್ಬು ಶಿಲ್ಪವು ಗೋಚರವಾಗುತ್ತದೆ. ಈ ಶಿಲ್ಪದಲ್ಲಿಯು ಬೇಲೂರ ಹಳೇಬೀಡಿನ ಶಿಲ್ಪಗಳಲ್ಲಿರುವ ಕುಸೂರಿ ವಿನ್ಯಾಸಗಳು ಮತ್ತು ಅಲ್ಲಿಯ ಶಿಲ್ಪದ ಮೈವಳಕೆ ಜ್ಞಾನೇಶ್ವರ ಅವರು ರಚಿಸಿರುವ ಶಿಲ್ಪಗಳಲ್ಲಿ ನಾವು ಆ ಲಕ್ಷಣಗಳನ್ನು ಕಾಣಬಹುದು. ಅದಕ್ಕೆ ಸಾಕ್ಷಿ ಅವರು ಮಾಡಿರುವ ಶಿಲ್ಪಗಳೆ ಕಾರಣವಾಗಿದೆ. ಹಾಗೂ ತಮ್ಮದೇ ಶೈಲಿ–ತಂತ್ರಗಾರಿಕೆಯನ್ನು ಬಳಸಿಕೊಂಡು ರಚಿಸಿದ್ದು ಕಲಾವಿದ ಜ್ಞಾನೇಶ್ವರ ಅವರ ಪ್ರೀತಿ ಶಿಲ್ಪಕಲಾ ಕೃತಿಗಳಲ್ಲಿ ಅವರ ಮುತ್ತಾಕ ತಿಪ್ಪಜೀಯವರು ಕಲಿಸಿದ ಪಾಠ ಹಂತಗಳನ್ನು ಬಳಸಿಕೊಂಡು ಶಿಲ್ಪಗಳನ್ನು ಜ್ಞಾನೇಶ್ವರ ಅವರು ರಚಿಸುತ್ತಾರೆ. ಹಾಗೂ ಈ ಶಿಲ್ಪವು ನೋಡುಗಾರನಿಗೆ ಅನೇಕ ಶಿಲ್ಪ ವಿನ್ಯಾಸವನ್ನು ಕಾಣುವ ಭಾಗ್ಯವನ್ನು ಒದಗಿಸಿಕೊಡುವಂತ ಒಂದು ಮೂರ್ತಿಶಿಲ್ಪ ಇದಾಗಿದೆ ಎಂದರೆ ತಪ್ಪಿಲ್ಲ.

**೪. ಶಿವತಾಂಡವ ಶಿಲ್ಪ**

ಈ ಶಿಲ್ಪವು ೨ ೧/೨ ಅಡಿಯದಾಗಿದ್ದು ಬಿಳಿಕಲ್ಲಿನಲ್ಲಿ ಕೆತ್ತಲಾಗಿದೆ. ನಂದಿಯ ಮೇಲೆ ಒಂಟಿಗಾಲಿನ ಮೇಲೆ ಜಡೆಯನ್ನು ಬಿಚ್ಚಿ ತಾಂಡವವಾಡುತ್ತಿರುವ ಶಿವನು ಬಲಗಡೆ ಗಣಪತಿಯು

ಎಡಗಡೆ ಸುಬ್ರಮಣ್ಯನು ಕೈಮುಗಿದು ನಿಂತು ತಂದೆಯನ್ನು ಸಮಾಧಾನಪಡಿಸುತ್ತಿರುವುದು ಕೊರಳಲ್ಲಿ ಸರ್ಪವು, ಸೊಂಟದಲ್ಲಿ ಹುಲಿ ಚರ್ಮವು ಹಿಡಿದು ನಿಂತಿರುವ ಶಿಲ್ಪವಿದು. ಒಂದು ಸಂಯೋಜನಾ ಶಿಲ್ಪವಾಗಿದೆ. ಇದು ಒಂದು ಸೂಕ್ಷ್ಮ ಕೆತ್ತನೆಯಿಂದ ಒಳಪಟ್ಟಿದೆ. ನೈಜವಾದ ಶಿಲ್ಪ ಕೆತ್ತನೆಯಾಗಿದ್ದು ಜ್ಞಾನೇಶ್ವರ ಅವರು ಇಂತಹ ಶಿಲ್ಪಗಳಿಂದ ಪ್ರಖ್ಯಾತಿ ಹೊಂದಿದು. ಮತ್ತು ಜೀವನಾದ ಕೊನೆಯವರೆಗೆ ಈ ರೀತಿಯ ಶಿಲ್ಪಗಳನ್ನು ಮಾಡುವಾಗ ನಂಬಿಕೆಯು ಜ್ಞಾನೇಶ್ವರ ಅವರಿಗೆ ಇದೇ ಎಂದು ತಾವೇ ಹೇಳಿಕೊಳ್ಳುತ್ತದೆ.

**೫. ಅನಂತಶಯನ ಶಿಲ್ಪ**

ಈ ಶಿಲ್ಪವು ನಿರ್ಮಾಣ ಹಂತದಲ್ಲಿರುವುದು ಏಳು ಹೆಡೆಯ ಸರ್ಪದ ಮೇಲೆ ಅನಂತ ಪದ್ಮನಾಭನು ಮಲಗಿರುವನು. ಮಡದಿಯು ಅನಂತಶಯನ ಕಾಲುಗಳನ್ನು ಒತ್ತುತ್ತಾ ಕುಳಿತಿರುವುದು ಹಾಗೂ ಅನಂತಶಯನ ಹಿಂಭಾಗದಲ್ಲಿ ಲಕ್ಷ್ಮಿಯು ಇರುವ ಈ ಶಿಲ್ಪಕಲಾ ಕೃತಿಯ ಮೈಸೂರು ಬಿಳಿ ಕಲ್ಲಿನಲ್ಲಿ ಅತಿಸೂಕ್ಷ್ಮವಾಗಿ ಕೆತ್ತನೆಯನ್ನು ಈ ಶಿಲ್ಪದಲ್ಲಿ ಕಾಣಬಹುದಾಗಿದೆ. ಸರ್ಪಗಳ ನೈಜ ಸೌಂದರ್ಯವು ಕಂಡುಬರುತ್ತದೆ. ಶಿಲ್ಪದ ಮುಂದೆ ಗದೆಯಿದೆ ಹಾಗೂ ವಸ್ತುವಿನ್ಯಾಸವನ್ನು ಬಳಿದು ಇದನ್ನು ಪೂರ್ಣಗೊಳಿಸಲಾಗಿದೆ. ಬೇಲೂರಿನ ಶಿಲ್ಪಕಲಾ ವಿನ್ಯಾಸವನ್ನು ಪೂರ್ಣ ಪ್ರಮಾಣದಲ್ಲಿ ಬಳಸಿಕೊಂಡು ಈ ಶಿಲ್ಪವನ್ನು ಮಾಡಿದ್ದಾರೆ. ಆದರೆ ಪ್ರಮಾಣ ಭಂಗಿ, ಮೈವಳಿಕೆ ಎಲ್ಲವೂ ಒಂದು ರೀತಿಯಲ್ಲಿ ಆಕರ್ಷಕವಾಗಿದೆ.

**೬. ಚೌಡೇಶ್ವರಿಯ ಶಿಲ್ಪ**

ಈ ಶಿಲ್ಪವು ૩ ೧/೨ಅಡಿಯದ್ದಾಗಿದ್ದು ಕಪ್ಪು ಕಲ್ಲಿನಲ್ಲಿನ ಶಿಲ್ಪವಾಗಿದ್ದು ಕುಳಿತಿರುವ ಭಂಗಿಯ ಶಿಲ್ಪವಾಗಿದ್ದು ಈ ಶಿಲ್ಪವು ಪ್ರಭಾವಳಿಯನ್ನು ಹೊಂದಿದ್ದು ಅ ಪ್ರಭಾವಳಿಯ ಹುಬ್ಬಳ್ಳಿಯ ಸೂಕ್ಷ್ಮವಾಗಿ ಕೆತ್ತಲ್ಪಟ್ಟಿದ್ದು ಮುಖದಲ್ಲಿ ವಿಶೇಷವಾದ ತೇಜಸ್ಸು. ಈ ಶಿಲ್ಪವನ್ನು ನೋಡಿದರೆ ಕೈ ಮುಗಿಯುವಷ್ಟು ಭಕ್ತಿಭಾವವು ಬರುತ್ತದೆ. ಈ ಶಿಲ್ಪವು ಶಿವಮೊಗ್ಗ ಜಿಲ್ಲೆಯ ಜನರಿಗೆ ನೋಡುಗರಿಗೆ ಪೂಜ್ಯನೀಯವಾಗಿದೆ.

**೭. ಕನ್ನಿಕಾ ಪರಮೇಶ್ವರಿ ಶಿಲ್ಪ**

ಈ ಶಿಲ್ಪವು ೫ ಅಡಿಯಾಗಿದ್ದು ಕಪ್ಪು ಕಲ್ಲಿನಲ್ಲಿ ಕೆತ್ತಲಾಗಿದೆ. ನಿಂತಿರುವ ಕನ್ನಿಕಾ ಪರಮೇಶ್ವರಿಯ ಬಲಗೈಯಲ್ಲಿ ಕಮಲವು ಎಡದಗೈಯಲ್ಲಿ ಗಿಳಿಯನ್ನು ಹಿಡಿದು ನಿಂತಿರುವ ಕನ್ನಿಕಾ ಪರಮೇಶ್ವರಿಯನ್ನು ಮುಗ್ಧ ಭಾವನೆಯ ಮುಖಭಾವವನ್ನು ಹೊಂದಿದ್ದು ನೋಡುಗನಲ್ಲಿ ಪೂಜ್ಯಭಾವನೆ ಹುಟ್ಟಿಸುವಂತಹ ಒಂದು ಶಕ್ತಿ ತುಂಬಿ ಕಲಾವಿದರಾದ ಜ್ಞಾನೇಶ್ವರ ಅವರು ಈ ಶಿಲ್ಪವನ್ನು ರಚಿಸಿದ್ದಾರೆ. ಶಿಲ್ಪದಲ್ಲಿ ಜೀವಂತಿಕೆಯ ವಿವಿಧ ವಿನ್ಯಾಸದ ಬಳಕೆ ಈ ಎಲ್ಲವು ಕನ್ನಿಕಾ ಪರಮೇಶ್ವರಿ ಶಿಲ್ಪಕ್ಕೆ ಮೆರುಗನ್ನು ತಂದುಕೊಟ್ಟಿದೆ ಎಂದು ಹೇಳಬಹುದು. ಒಟ್ಟಾರೆ ಶಿಲ್ಪವು ನೋಡುಗನಿಗೆ ಆನಂದ ಮತ್ತು ನೆಮ್ಮದಿಯನ್ನು ನೀಡುವಷ್ಟು ಅದ್ಭುತೆಯನ್ನು ಹಿಂದಿದೆ.

**೮. ಶಿಲ್ಪಗಳು**

ಶಂಕರಾಚಾರ್ಯ ಹಾಗೂ ಅನೇಕ ಶಿಲ್ಪಿಗಳು ನಿಮ್ಮ ಗಮನದಲ್ಲಿರುವುದು. ಜ್ಞಾನೇಶ್ವರ ಅವರು ತಮ್ಮ ಮನೆಯಲ್ಲಿ ಕೆತ್ತನೆಯನ್ನು ಮಾಡುತ್ತಾರೆ ಇದರಲ್ಲಿ ಶಂಕರಾಚಾರ್ಯ. ಶಿಲ್ಪವು ಪೂರ್ಣವಾಗಿದ್ದು ನೋಡಲು ದುಂಡಾದ ಮೈ ಹೋಲಿಕೆಯನ್ನು ಹೊಂದಿದೆ ಹಾಗೂ ೨ ಅದೆ ಅವುಗಳಲ್ಲಿ ಪೂರ್ಣವಾಗಿದ್ದು ಜೊತೆಯಲ್ಲಿರುವ ಚಿಕ್ಕ ಚಿಕ್ಕ ಶಿಲ್ಪಗಳು ಪೂರ್ಣಗೊಳಿಸಿದೆ.

**೯. ಶಿವ ಶಿಲ್ಪ**

ಶಿರಭಾವಶಿಲ್ಪ ಇದು ೧೫ ಇಂಚಿನದು. ಈ ಶಿಲ್ಪವು ಶಿರಭಾವ ಮೈಸೂರು ಬಿಳಿ ಕಲ್ಲಿನಿಂದ ಕೆತ್ತಲಾಗಿದೆ. ಜ್ಞಾನೇಶ್ವರ ಅವರು ನೈಜ್ಯವಾದ ಶೈಲಿಯಲ್ಲಿ ಅವರ ಈ ಶಿಲ್ಪವನ್ನು ಕೆತ್ತಿದ್ದಾರೆ. ಬೇಲೂರು ಹಳೇಬೀಡಿನ ಶಿಲ್ಪಗಳ ವಿನ್ಯಾಸವನ್ನು ಬಳಸಲಾಗಿದೆ. ಈ ಶಿಲ್ಪ ದುಂಡಾಗಿದ್ದು ಕೊರಳಲ್ಲಿ ನಾಗರಹಾವು ಇದೆ. ಹಾಗೂ ಹುಲಿಯ ಚರ್ಮವನ್ನು ಸುತ್ತಿಕೊಂಡಿರುವ ವಸ್ತ್ರವಿನ್ಯಾಸವನ್ನು ಜ್ಞಾನೇಶ್ವರ ಅವರು ಅತಿಸೂಕ್ಷ್ಮವಾಗಿ ಮೂಡಿಬಂದಿದೆ.

**೧೦. ದಕ್ಷಿಣಾಮೂರ್ತಿ ಶಿಲ್ಪ**

ಈ ಶಿಲ್ಪವು ೨ ಅಡಿಯಿದ್ದು ಮೈಸೂರು ಬಿಳಿಕಲ್ಲಿನದಾಗಿದ್ದು ಹಾಗೂ ಸಂಯೋಜನಾ ಶಿಲ್ಪವಾಗಿದೆ. ದಕ್ಷಿಣಮೂರ್ತಿಯ ಕಾಲಿನ ಕೆಳಗೆ ಮಗುವನ್ನು ತುಳಿದಿರುವುದು. ಎಡ ಮತ್ತು ಬಲದಲ್ಲಿ ಋಷಿಮುನಿಯರು ಇದ್ದು ದಕ್ಷಿಣಮೂರ್ತಿಯು ಸೊಂಟಕ್ಕೆ ಹುಲಿಯ ಚರ್ಮವನ್ನು ಸುತ್ತಿರುವುದು, ಎಡಗೈಯಲ್ಲಿ ಲಿಂಗವನ್ನು ಹಿಡಿದಿರುವುದು, ಕೊರಳಲ್ಲಿ ಅಲಂಕಾರಕ್ಕೆ ಆಭರಣಗಳನ್ನು ಕೆತ್ತಲಾಗಿದೆ. ಈ ರೀತಿಯಾಗಿ ಜ್ಞಾನೇಶ್ವರ ಅವರು ಹೆಚ್ಚಿನ ಶಿಲ್ಪಗಳನ್ನು ಸಾಂಪ್ರದಾಯಿಕ ಶೈಲಿಯಲ್ಲಿ ರಚಿಸುವುದು ಮತ್ತು ತಮ್ಮದೇ ತಂತ್ರಗಾರಿಕೆಯನ್ನು ಬಳಸಿ ಶಿಲ್ಪಕಲಾಕೃತಿಯನ್ನು ಪೂರ್ಣಗೊಳಿಸಿದ್ದಾರೆ.

**೧೧. ನಾಗದೇವತೆ ಶಿಲ್ಪ**

ಈ ಕಲಾಕೃತಿಯು ೨೧/೨ ಅಡಿಯ ನಾಗದೇವತೆಯ ಶಿಲ್ಪವಾಗಿದ್ದು, ಈ ಶಿಲ್ಪದಲ್ಲಿ ಅರ್ಧ ಭಾಗವು ದೇವತೆಯ ಮತ್ತು ಇನ್ನುಳಿದ ಅರ್ಧಭಾಗವು ಹಾವಿನ ಬಾಲವಾಗಿದ್ದು, ಶಿಲ್ಪವು ವಿಶೇಷವಾಗಿದೆ. ಎಡಬಲದಲ್ಲಿ ಎರಡು ಹಾವುಗಳು ಹೆಡೆಯನ್ನು ಎತ್ತಿರುವುದು ಹಾಗೂ ದೇವತೆಯ ತಲೆಯ ಮೇಲೆ ಏಳು ಹೆಡೆಯ ಸರ್ಪವಿದ್ದು, ಹಿಂಭಾಗದಲ್ಲಿ ಪ್ರಬಾವಳಿಯು ಹಾಗೂ ಶಿಲ್ಪವು ಸರ್ಪದ ಎಲ್ಲಾ ಲಕ್ಷಣಗಳನ್ನು ಹೊಂದಿದ್ದು, ಈ ಶಿಲ್ಪವು ಗ್ರಾನೈಟ್ ಕಲ್ಲಿನಲ್ಲಿ ಕೆತ್ತಲಾಗಿದೆ. ವಿವಿಧ ವಿನ್ಯಾಸಗಳನ್ನು ಬಳಸಿಕೊಂಡು ಈ ಶಿಲ್ಪವನ್ನು ಜ್ಞಾನೇಶ್ವರ ಅವರು ರಚಿಸಿದ್ದಾರೆ. ಈ ಶಿಲ್ಪದಲ್ಲಿ ಸಹ ಬೇಲೂರಿನ ಹಳೇಬೀಡಿನ ಕುಸುರಿ ಕೆತ್ತನೆಯನ್ನು ಬಳಸಿಕೊಂಡು ಅದರಲ್ಲಿ ತಮ್ಮದೇ ತಂತ್ರಗಾರಿಕೆಯನ್ನು ಬಳಸಿ ಶಿಲ್ಪವನ್ನು ಪೂರ್ಣಗೊಳಿಸಿದ್ದಾರೆ.

**೧೨. ಶಾರದ ಶಿಲ್ಪ**

ಈ ಶಿಲ್ಪವು ೧ ಅಡಿಯಾದಾಗಿದೆ ಮತ್ತು ಶಾರದಾ ದೇವಿಯ ವಾಹನವು ನವಿಲು ಹಾಗೂ ಕೈಯಲ್ಲಿ ವೀಣೆಯನ್ನು ಹಿಡಿದು ನಿಂತಿರುವ ಭಂಗಿಯ ಶಿಲ್ಪವಿದ್ದು ಈ ಶಿಲ್ಪದ ವಸ್ತ್ರವಿನ್ಯಾಸ, ಸೂಕ್ಷ್ಮ ಕೆತ್ತನೆ, ವಿವಿಧ ಬಗೆಯ ಹೂವು, ಬಳ್ಳಿ ಶಂಕು ಹೀಗಿರುವ ವಿನ್ಯಾಸಗಳು ಈ ಶಿಲ್ಪದಲ್ಲಿ ಬಳಸಿಕೊಂಡು ಶಿಲ್ಪರಚನೆಯನ್ನು ಮಾಡಿದ್ದಾರೆ. ಶಾರದ ಶಿಲ್ಪದ ಮುಖವು ಮುಗ್ದ ಭಾವನೆಯನ್ನು ಕಾಣಬಹುದಾಗಿದೆ.

**ನಿಮಿಷಾಂಬಾದೇವಿ ಶಿಲ್ಪ**

ಈ ಶಿಲ್ಪವು ೩೧/೨ ಅಡಿಯಾಗಿದ್ದು ಗ್ರಾನೈಟ್ ಕಲ್ಲಿನಿಂದ ಕೆತ್ತಲ್ಪಟ್ಟಿದೆ. ನಿಮಿಷಾಂಬ ವಿನ್ಯಾಸಗಳು ಅತಿ ಸುಂದರವಾಗಿ ಶಿಲ್ಪದಲ್ಲಿ ರಚಿಸಲ್ಪಟ್ಟಿದೆ. ಈ ಶಿಲ್ಪವು ಶಿವಮೊಗ್ಗ ವಿನೋಬನಗರ ದೇವಸ್ಥಾನದಲ್ಲಿ ಪೂಜಿಸಲ್ಪಡುತ್ತಿದೆ.

**೧೪. ದೂರ್ವಾಸಮುನಿಯ ಶಿಲ್ಪ**

ಮೈಸೂರು ಬಿಳಿಕಲ್ಲಿನಿಂದ ಕೆತ್ತಲ್ಪಟ್ಟಿರುವ ಶಿಲ್ಪವಾಗಿದ್ದು, ೨ ಅಡಿಯ ಶಿಲ್ಪ ಇದು. ಕಲ್ಲಿನ ಮೇಲೆ ಕುಳಿತಿರುವ ದೂರ್ವಾಸಮುನಿಯು ಧ್ಯಾನ ಮಾಡುತ್ತ ಕುಳಿತಿರುವ ಭಂಗಿ ಹಾಗೂ ಪ್ರಮಾಣಬದ್ಧತೆಯು ವಿಶೇಷವಾಗಿದೆ. ಮತ್ತು ಸೂಕ್ಷ್ಮವಾದ ಕೆತ್ತನೆಯು ಈ ಶಿಲ್ಪದಲ್ಲಿ ನಾವು ಕಾಣಬಹುದು. ನಂತರ ಕಪ್ಪು ಬಣ್ಣದಿಂದ ಬಳಿದು ಶಿಲ್ಪವನ್ನು ವಿಶೇಷವಾದ ವಸ್ತ್ರವಿನ್ಯಾಸದಿಂದ ಹಾಗೂ ದೂರ್ವಾಸಮುನಿಯ ಶಿಲ್ಪದ ನೋಡುವ ದೃಷ್ಟಿಯಾಗಲಿ ಹಾಗೂ ಧ್ಯಾನಕ್ಕೆ ಕುಳಿತಿರುವ ಅಂಶಗಳು ಶಿಲ್ಪಕ್ಕೆ ಮೆರಗನ್ನು ತಂದುಕೊಟ್ಟಿದೆ. ಈ ರೀತಿಯ ಶಿಲ್ಪಗಳು ಅತಿ ವಿರಳ ಎಂದು ಹೇಳಬಹುದು.

**೧೫. ಕೆಲವು ಶಿಲ್ಪಗಳು**

ದೇವಿಶಿಲ್ಪಗಳು ಮತ್ತೊಂದು ಕೃಷ್ಣನ ಶಿಲ್ಪ, ದರ್ಪಣ ಸುಂದರಿಯ ಶಿಲ್ಪ ಇನ್ನೊಂದು ರಾಜನ ಶಿಲ್ಪ, ಲಕ್ಷ್ಮಿ ಶಿಲ್ಪ, ಆಂಜನೇಯ ಶಿಲ್ಪ ಈ ಎಲ್ಲ ಶಿಲ್ಪಗಳನ್ನು ಜ್ಞಾನೇಶ್ವರ ಅವರು ಅತೀ ಸೂಕ್ಷ್ಮಕೆತ್ತನೆಯಿಂದ ಶಿಲ್ಪಗಳನ್ನು ಕೆತ್ತಿದ್ದಾರೆ ಮತ್ತು ಅದರಲ್ಲಿ ಶಿಲ್ಪಗಳು ಕುಳಿತಿರುವ ಭಂಗಿಯು ಹಾಗೂ ಆಂಜನೇಯನ ಶಿಲ್ಪವು ಗದೆಯನ್ನು ಹಿಡಿದಿರುವ ಭಂಗಿ ಹಾಗೂ ಕೃಷ್ಣನ ಶಿಲ್ಪವು ಕೊಳಲನ್ನು ಊದುತ್ತ ನಿಂತಿರುವ ಶಿಲ್ಪವು, ನಿರ್ಮಾಣ ಹಂತದಲ್ಲಿರುವ ನಿಮಿಷಾಂಬದೇವಿ ಶಿಲ್ಪವು ಕೂಡ ಬಹುವಿನ್ಯಾಸದಿಂದ ಕೂಡಿರುವುದು. ಅದರಲ್ಲಿ ವಸ್ತ್ರವಿನ್ಯಾಸ ಸಂದರ್ಭಕ್ಕೆ ಅನುಗುಣವಾಗಿ ಕೆತ್ತಲ್ಪಟ್ಟಿರುವುದು ಮತ್ತು ಇನ್ನುಳಿದ ಶಿಲ್ಪಗಳು ಸಾಂಪ್ರದಾಯಿಕ ವಿನ್ಯಾಸಗಳನ್ನು ಒಳಗೊಂಡಿದೆ. ಅವುಗಳ ಸೂಕ್ಷ್ಮ ಕೆತ್ತನೆಯು ಹಾಗೂ ತಂತ್ರಗಾರಿಕೆಯ ಶೈಲಿ ಎಲ್ಲವೂ ಬೇಲೂರು ಹಳೇಬೀಡಿನ ಕಲಾವಿನ್ಯಾಸಕ್ಕೆ ಹೋಲುವಂತಿರುವುದು ವಿಶೇಷವಾಗಿದೆ. ನಂತರ ಜ್ಞಾನೇಶ್ವರ ಅವರು ಈ ಎಲ್ಲಾ ಶಿಲ್ಪಗಳಲ್ಲಿ ಪ್ರತಿಯೊಂದು ಸೂಕ್ಷ್ಮ ಕೆತ್ತನೆಯನ್ನು ಮತ್ತು ಪ್ರಮಾಣಬದ್ಧತೆ

ಹಾಗೂ ವಸ್ತ್ರವಿನ್ಯಾಸ, ಮೈವಳಿಕೆ ಎಲ್ಲವನ್ನು ಒಂದು ಸರಿಯಾದ ಹಂತಗಳ ಬಳಸಿ ಶಿಲ್ಪಗಳನ್ನು ರಚನೆ ಮಾಡಿರುವುದನ್ನು ಕಾಣುತ್ತೇವೆ.

ಒಟ್ಟಾರೆ ಅಧ್ಯಾಯ ಮೂರರಲ್ಲಿ ಕೆ. ಜ್ಞಾನೇಶ್ವರ ಅವರ ಕಲಾಕೃತಿಗಳ ವರ್ಗೀಕರಣವನ್ನು ಅಧ್ಯಯನ ಮಾಡಲಾಗಿದೆ. ಅದರಲ್ಲಿ ರೇಖಾಚಿತ್ರ, ವರ್ಣಚಿತ್ರ, ಶಿಲ್ಪಗಳು ಹೀಗೆ ಎಲ್ಲಾ ಕಲಾಕೃತಿಗಳನ್ನು ಜ್ಞಾನೇಶ್ವರ ಅವರು ಯಾವ ಮಾಧ್ಯಮದಲ್ಲಿ ಮಾಡಿದ್ದಾರೆ ಮತ್ತು ಬಣ್ಣದ ಬಳಿಕ ರೇಖೆಯ ಲಕ್ಷಣಗಳು. ಸಂದರ್ಭಿಕಾ ಚಿತ್ರಗಳು ಶಿಲ್ಪಗಳು ಹೀಗೆ ಇವರು ರಚಿಸಿದ ಕಲಾಕೃತಿಗಳ ಎಲ್ಲಾ ಸಂಕ್ಷಿಪ್ತ ವಿವರವನ್ನು ಈ ಅಧ್ಯಾಯ ಕಟ್ಟಿಕೊಡುವುದು ಮತ್ತು ವಿಮರ್ಶೆಗೆ ಒಳಪಡಿಸಿರುವುದು ಗಮನಾರ್ಹವಾಗಿದೆ. ಈ ಅಧ್ಯಾಯದಲ್ಲಿ ಜ್ಞಾನೇಶ್ವರ ಅವರು ಕಲೆ, ಕಲಾಕೃತಿಗಳನ್ನು ಯಾವ ರೀತಿ ರಚಿಸಿದರು. ಅವುಗಳ ಹಿನ್ನೆಲೆ ಎಲ್ಲವನ್ನು ತಿಳಿಸಲಾಗಿದೆ. ಇದರಿಂದ ಜ್ಞಾನೇಶ್ವರ ಅವರ ಕಲಾಕೃತಿ ರಚಿಸಲು ಎಷ್ಟು ಸಮಯವನ್ನು ತೆಗೆದುಕೊಳ್ಳುತ್ತಿದ್ದರು. ಮತ್ತು ಅವರ ಕಲಾವೈಖರಿಯನ್ನು ಸಹ ತಿಳಿಸಲಾಗಿದೆ.

* * *



ಚಂದ್ರಭಾರತಿಚಾರ್ಯರು



ಶನಿಮಹತ್ಮ



ಪಂಚಮುಖಿ ಗಣೇಶ ಶಿಲ್ಪ ೧೮"



ಶಿವತಾಂಡವ ಶಿಲ್ಪ ೨ ೧/೨'





ದೇವಿ ಶಿಲ್ಪ



ಕನ್ನಿಕಾಪರಮೇಶ್ವರಿ ಶಿಲ್ಪ ೫'

ಶಿಲ್ಪಗಳು



ಶಿವ ಶಿಲ್ಪ ೧೫"



ದಕ್ಷಿಣಾಮೂರ್ತಿ ಶಿಲ್ಪ ೨'



ನಾಗದೇವತೆ ಶಿಲ್ಪ ೨ ೧/೨'



ಶಾರದೆ ಶಿಲ್ಪ ೧'



ನಿಮಿಷಾಂಬ ಶಿಲ್ಪ ೩ ೧/೨'



ದೂರ್ವಾಸ ಶಿಲ್ಪ ೨'



ಲಕ್ಷ್ಮಿನರಸಿಂಹ ಶಿಲ್ಪ



ರಾಧಾಕೃಷ್ಣ ಶಿಲ್ಪ ಳ'



ಯಕ್ಷಿಣಿ ಶಿಲ್ಪ



ಹಸಿವು (ಟೆರಾಕೋಟ)



ಅನಂತಶಯನ ಶಿಲ್ಪ (೬'*೫')



ಆಂಜನೇಯ ಶಿಲ್ಪ ೬ ೧/೨'



ಶಕ್ತಿಗಣಪತಿ (ಕ್ಲೇ) ೬'

ಅಧ್ಯಾಯ ನಾಲ್ಕು

# ಕೆ. ಜ್ಞಾನೇಶ್ವರ ಅವರ ಕಲಾಕೃತಿಗಳ ಮೇಲಾದ ತಂತ್ರಗಾರಿಕೆ ಹಾಗೂ ಶೈಲಿ ಪ್ರಭಾವ ಪ್ರೇರಣೆ

## ಕೆ. ಜ್ಞಾನೇಶ್ವರ ಅವರ ಕಲಾಕೃತಿಗಳ ಮೇಲಾದ ತಂತ್ರಗಾರಿಕೆ ಹಾಗೂ ಶೈಲಿ ಪ್ರಭಾವ ಪ್ರೇರಣೆ

ಕಲಾವಿದರು ತಮ್ಮ ಜೀವನದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಪರಿಸರ ಸೂಕ್ಷ್ಮಾತಿಸೂಕ್ಷ್ಮವಾಗಿ ಅವರ ಮೇಲೆ ದೀರ್ಘಕಾಲದ ಪ್ರಭಾವವನ್ನು ಬೀರುತ್ತದೆ.[1] ಇಲ್ಲಿ ಕಲಾವಿದರು ತಮ್ಮ ಸಮಾಜ ಅಥವಾ ಸಮುದಾಯದಿಂದ ಪ್ರಭಾವಿತರಾಗುತ್ತಾರೆ. ಒಂದು ಸಮುದಾಯದಲ್ಲಿ ವಿಶಿಷ್ಟವಾದ ಕೆಲವು ಸಂಪ್ರದಾಯ ಅಥವಾ ಪರಂಪರೆಗಳು ಹಾಗೂ ಕಲಾಪಂಥಗಳು ಹುಟ್ಟಿಕೊಳ್ಳುತ್ತವೆ. ಬೆಳೆಯುತ್ತಿರುವ ಕಲಾವಿದರ ಅಂಶವು ಸ್ವಾಭಾವಿಕವಾಗಿ ಕಲಾವಿದರಲ್ಲಿ ಕಂಡುಬರುವ ಸ್ವಭಾವಗಳಾಗಿವೆ. ಅವುಗಳ ಪ್ರಭಾವಕ್ಕೆ ಸಿಲುಕಿಕೊಳ್ಳುತ್ತಾರೆ.[2]

ಮಾನವನ ಜೀವನಕ್ಕೂ ಕಲೆಗೂ ನಿಕಟವಾದ ಸಂಬಂಧವಿದೆ. ವ್ಯಕ್ತಿ ತಾನು ಅನುಭವಿಸಿದ ಘಟನೆ, ಸ್ಥಳ, ಸ್ಥಿತಿಗತಿಗಳ ನೋವು–ನಲಿವುಗಳ ಮುಂತಾದ ಒತ್ತಡದಿಂದ ಒಂದೊಂದು ರೀತಿಯ ಸಂವೇಧನೆಯನ್ನು ಪಡೆಯುತ್ತಾನೆ. ಅದಕ್ಕೆ ಅನುಗುಣವಾಗಿ ತನ್ನ ಅನಿಸಿಕೆಯನ್ನು ಹೇಳಬೇಕು ಎನ್ನುವ ಆಕಾಂಕ್ಷೆ ಪ್ರತಿಯೊಬ್ಬನಲ್ಲಿಯ ಸ್ವಭಾವ ಜನ್ಯವಾಗಿರುತ್ತದೆ. ಆದರೆ ಆ ಗುಣ, ಅನುಭವಗಳು ಪ್ರಜ್ಞೆಯ ವಸ್ತುಗಳಾದಾಗ ಅವು ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತವೆ. ಇವು ವಿವಿಧ ರೀತಿಯ ಸಂವಹನ ಮಾಧ್ಯಮಗಳ ಮೂಲಕ ಸೃಷ್ಟಿಸುವ ಪ್ರತಿ ಒಂದು ಗಿಡ, ಮರ, ಹೂಬಳ್ಳಿ ಹೀಗೆ ಅವನು ನೆಲೆಸಿರುವ ಈ ಒಂದು ವಾತಾವರಣವು ಅವನಲ್ಲಿ ಪ್ರೇರಣೆಯನ್ನು ತುಂಬುತ್ತವೆ. ಈ ಒಂದು ವಾತಾವರಣವನ್ನು ತಾನು ಅನುಭವಿಸಿದಾಗ ಮಾತ್ರ ಅದು ಕಲಾತ್ಮಕವಾಗಿ ರೂಪಿತವಾಗುತ್ತದೆ. ಆದಕ್ಕಾಗಿ ಸಾಮಾನ್ಯ ಮನುಷ್ಯನಿಗೂ ಕಲಾವಿದನಿಗೂ ಸ್ವಲ್ಪ ವ್ಯತ್ಯಾಸವಿದೆ. ಸಾಮಾನ್ಯ ಮನುಷ್ಯನಾದವನು ತನ್ನ ಸುತ್ತಮುತ್ತಲಿನ ಪರಿಸರವನ್ನು ನೋಡುವ ರೀತಿಗೂ, ಅದೇ ಪರಿಸರವನ್ನು ಒಬ್ಬ ಕಲಾವಿದನಾದವನು

೧. ಡಾ. ಎಸ್.ಸಿ. ಪಾಟೀಲ (ಸಂ) ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು ಪುಟ : ೬೫
೨. ಡಾ. ಎಸ್.ಸಿ. ಪಾಟೀಲ (ಸಂ) ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು ಪುಟ : ೬೪

ನೋಡುವ ರೀತಿಗೂ ತುಂಬ ವ್ಯತ್ಯಾಸವಿರುತ್ತದೆ. ಸಾಮಾನ್ಯ ಮನುಷ್ಯನಾದವನು ಈ ವಾತಾವರಣವನ್ನು ನೋಡಿಯೂ ಅವನಿಗೆ ಅಲ್ಲೇ ಇದ್ದರು ಕೂಡ ಅದು ಅವನಿಗೆ ಯಾವ ರೀತಿಯ ಪರಿಣಾಮ ಬೀರಬಲ್ಲದು ಎಂಬುವುದು ಮುಖ್ಯ. ಆದರೆ ಅದೇ ಪರಿಸರದ ವಾತಾವರಣವನ್ನು ಒಬ್ಬ ಕಲಾವಿದನಾದವನು ಕಲಾತ್ಮಕ ದೃಷ್ಟಿಯಿಂದ ನೋಡುತ್ತಾನೆ. ಉದಾಹರಣೆಗಾಗಿ ಒಂದು ಹಳ್ಳಿಯ ವಾತಾವರಣವನ್ನು ನಾವು ತೆಗೆದುಕೊಂಡಾಗ ಹಳ್ಳಿಯೊಂದರ ಮೇಲೆ ಆ ಒಂದು ಕಲ್ಪನೆಯನ್ನು ಮಾಡುವುದು ಸಹಜ ಅಲ್ಲಿಯೂ ಜನಜೀವನ ರಸ್ತೆಯ ಮಧ್ಯದಲ್ಲಿ ಕಸ, ಕಡ್ಡಿಗಳು, ಹಳೆಯ ಪಾಳು ಬಿದ್ದಿರುವ ಮನೆಗಳು, ವಿಶಾಲವಾದ ಮರಗಳು, ಹಳೆಯ ದೇವಾಲಯಗಳು ಅಲ್ಲಲ್ಲಿ ಬಿದ್ದಿರುವ ಶಾಸನಗಳು, ಬಯಲು ಪ್ರದೇಶದ ಎಲ್ಲ ಚಿತ್ರಗಳು ಆ ವಾತಾವರಣವನ್ನು ನೋಡಿದಾಗ ನೆನಪಿಗೆ ಬರುತ್ತದೆ. ಸಾಮಾನ್ಯ ಮನುಷ್ಯನಿಗೆ ಇವುಗಳನ್ನು ನೋಡಿದರು ಅವನಿಗೆ ಅವುಗಳಲ್ಲಿ ಕಲಾಆಸಕ್ತಿ ಕಂಡುಕೊಳ್ಳಲಾರನು ಎಂಬ ಅಂಶವನ್ನು ಮನಗಾಣಬಹುದು.

ಮೇಲಾಗಿ ಅವನು ಇವುಗಳನ್ನು ಅರಿಯದೆ ಹೋಗುತ್ತಾನೆ. ಒಂದು ಶಾಸನವನ್ನು ನೋಡಿದರೆ ಅದರಿಂದ ತಿಳಿದುಕೊಳ್ಳದೆ ಅದರ ಮೇಲೆ ಬೇರೆನೋ ಪ್ರಯೋಗಗಳನ್ನು ಮಾಡಿ ಅದನ್ನು ನಿರೂಪಗೊಳಿಸುತ್ತಾನೆ. ಆದರೆ ಕಲಾವಿದನಿಗೆ ಇವೆಲ್ಲವು ಕಲಾತ್ಮಕವಾಗಿ ಕಾಣಿಸುತ್ತದೆ. ವಿಕೋಪ ಗೊಂಡಿರುವ ಶಾಸನವನ್ನು ನೋಡಿ ಅದರಲ್ಲಿ ಏನಿದೆಯೆಂದು ತಿಳಿದುಕೊಳ್ಳಲು ಪ್ರಯತ್ನಿಸುತ್ತಾನೆ. ಇದು ಯಾವ ಕಾಲದ್ದು ಎಂಬ ಹತ್ತು ಹಲವು ಬಗೆಯ ಕಲಾತ್ಮಕ ಮತ್ತು ಸಂಶೋಧನಾತ್ಮಕ ದೃಷ್ಟಿಯಿಂದ ಅವಲೋಕಿಸುತ್ತಾನೆ. ಒಂದು ಹಳೆಯ ಪಾಳುಬಿದ್ದ ಮನೆಯನ್ನು ನೋಡಿದ ಕೂಡಲೆ ಅದರ ಆಕಾರ ಮೈವಳಿಕೆ ಮತ್ತು ಅದರಲ್ಲಿರುವ ಸುಂದರತೆಯನ್ನು ಕಲಾತ್ಮಕವಾಗಿ ಗಮನಿಸುತ್ತಾನೆ. ಈ ವಿಷಯಗಳನ್ನು ತನ್ನ ಆರಂಭದ ಕಲಾಕ್ರಿಯೆಗಳಲ್ಲಿ ಬಳಸಿಕೊಳ್ಳುತ್ತಾನೆ. ಇವುಗಳಲ್ಲದೆ ಆ ಹಳ್ಳಿಗಳಲ್ಲಿರುವ ದನ ಕರುಗಳು ಗುಡಿಸಲುಗಳಂತಹ ವಿಷಯಗಳನ್ನು ಸಹಿತ ಅವನು ಚಿತ್ರಿಸಲು ವಿಷಯವಸ್ತುಗಳನ್ನಾಗಿ ಬಳಸಿಕೊಳ್ಳುತ್ತಾನೆ. ಹೀಗೆ ಒಬ್ಬ ಕಲಾವಿದನಾಗಿ ಅವನು ನೆಲಸಿರುವ ಪರಿಸರದ ವಾತಾವರಣವೆ ಅವನಿಗೆ ಮೊದಲ ಪ್ರೇರಣೆಯಾಗುತ್ತದೆ. ಎಂದು ಹೇಳಬಹುದು.

ವ್ಯಕ್ತಿಯ ಜೀವನ ಮತ್ತು ಸಮಾಜ ರಾಜಕೀಯ, ಆರ್ಥಿಕ ಸ್ಥಿತಿ ವ್ಯವಸ್ಥೆಗಳನ್ನು ರೂಪಿಸುವ ನೀತಿ, ಮತ, ಧರ್ಮ, ತತ್ವಶಾಸ್ತ್ರಗಳು ಜೊತೆಗೆ ಕಲಾಜೀವನದ ಹಂತಗಳು ಇಷ್ಟೇ ಎಂದು ಮಿತಿ ಹೇರುವುದು ಒಂದು ಭಾಗ ಅಸಾಧ್ಯವಾಗಿರುವಂತೆ. ಕಲೆ ಮತ್ತು ಜೀವನದ ಸಂಬಂಧವು ಇಷ್ಟೇ ಎಂದು ನಿಗದಿಮಾಡಿ ಹೇಳುವುದೂ ಅಸಾಧ್ಯ ಕಾರ್ಯ, ಕಲೆಗಾಗಿ ಕಲೆ, ಹಾಗೂ ವ್ಯಕ್ತಿತ್ವ ಎಂಬ ವಾಸ್ತವಿಕತೆ ರಮ್ಯತೆ ಇತ್ಯಾದಿಗಳು ತಮ್ಮದೇ ಆದ ಜೀವನ ದೃಷ್ಟಿಗಳನ್ನು ಅವಲಂಬಿಸುವ ವಿಷಯಗಳೂ ಇವೆ[೩] ಎಂದು ಹೇಳಬಹುದು. ಒಂದು ಕಲೆಯ ಒಂದು ವಸ್ತುವಿನ ಯಥಾವತಾದ ಚಿತ್ರಣದಿಂದ

೩. ಡಾ. ಎಸ್.ಎಲ್. ಭೈರಪ್ಪ : ಕಲೆ ಮತ್ತು ಜೀವನ, ಪುಟ : ೨೧

ಭೌತಿಕ ಜಗತ್ತಿನ ಅನುಭವ ನೀಡುತ್ತದೆ. ಆದರೆ ಅದರಲ್ಲಿ ಯಾವುದೇ ರೀತಿಯ ಸೃಜನಶೀಲತೆಯ ಪ್ರತಿಭೆಯನ್ನು ಮತ್ತು ಪ್ರೇರಣೆಯನ್ನು ಸ್ಪಷ್ಟವಾಗಿ ಗುರುತಿಸಿದಾಗಲೇ ಕಲೆಯ ಅನುಭವವನ್ನು ವ್ಯಕ್ತಪಡಿಸಿದಂತಾಗುತ್ತದೆ ಹಾಗೂ ಮನುಷ್ಯನ ಜೀವನದ ಯಾವುದೇ ಭಾಗವನ್ನು ಕಲಾತ್ಮಕ ರೀತಿಯಿಂದ ಸಿದ್ಧಪಡಿಸಬಹುದು ಮತ್ತು ಕಲಾತ್ಮಕವಲ್ಲದ ರೀತಿಯಲ್ಲೂ ಅದನ್ನು ಸ್ಪಷ್ಟಪಡಿಸಬಹುದು. ಅದರಲ್ಲಿ ನಮಗೆ ಸೃಜನಶೀಲತೆಯ ಅನುಭವ ಕಂಡುಬರುತ್ತದೆ. ಕಲೆಯಲ್ಲಿ ಕಂಡು ಬರುತ್ತಿರುವ ಸೌಂದರ್ಯವು ಆ ವಸ್ತುವಿನ ಸ್ವಾಭಾವಿಕ ಗುಣವಾಗಿದೆ. ಅದನ್ನು ಕಲಾವಿದನು ತಮ್ಮ ಕಲಾಕೃತಿಗಳನ್ನು ರಚಿಸಿ ಪ್ರದರ್ಶಿಸುತ್ತಿದ್ದಾನೆ. ಒಂದು ಹೂವು ನದಿ ಅಥವಾ ಪರ್ವತವು ಸುಂದರವಾಗಿ ಇದೆ ಎಂಬುದನ್ನು ಅವನು ತೋರಿಸಿಕೊಡುತ್ತಾನೆ. ಆ ವಸ್ತುಗಳ ಬಗ್ಗೆ ನಮಗೆ ಮೊದಲು ಇದ್ದ ಅನುಭವ ಅಥವಾ ಜ್ಞಾನಕ್ಕಿಂತ ಹೆಚ್ಚಿಗೆ ಹೊಸದೇನನ್ನೂ ಅವನು ಹೇಳುವಂತಿಲ್ಲ. ಸುಂದರ ಅಥವಾ ಅಸುಂದರ ಎಂಬುದರ ಬಗ್ಗೆ ತನ್ನ ಸೌಂದರ್ಯದ ವಿಷಯವಾಗಿ ಅಥವಾ ಜೀವನದ ವಿಷಯವಾಗಿ ನಮಗೆ ವಿಶಿಷ್ಟ ಅನುಭವವನ್ನು ಕಲಾವಿದನು ನೀಡುತ್ತಾನೆ ಎನಿಸಬಹುದು.[೪]

ಕಲಾವಿದನ ಬದುಕಿನಿಂದ ಸಂವೇದನೆಗೊಂಡು ಸ್ಫೂರ್ತಿಯನ್ನು ಕೊಡುವ ಚಿತ್ರಕಲೆ ಬದುಕಿನ ನಿಯಮವನ್ನು ಒಂದು ರೀತಿಯಾಗಿ ಅನುಸರಿಸುವಂತೆ ಮಾಡುತ್ತದೆ. ಅದರಲ್ಲಿಯೂ ಜೀವನದಲ್ಲಿರುವಂತೆಯೇ ಏಳು- ಬೀಳುಗಳ ಸಂಪ್ರದಾಯಗಳು ಅವುಗಳ ವಿರುದ್ಧ ಕ್ರಾಂತಿ ಇತ್ಯಾದಿಗಳನ್ನು ಕಾಣುತ್ತೇವೆ. ಜೀವನ ಬದಲಾದಯಿಸಿದಂತೆ ಜೀವನದ ಮೌಲ್ಯಗಳು ಬದಲಾಗುತ್ತವೆ. ಕಲೆಯು ಬದಲಾಗುತ್ತದೆ. ಹಳೆಯ ಸ್ಥಾನಕ್ಕೆ ಹೊಸದು ಬಂದು ನಿಲ್ಲುತ್ತದೆ. ಈ ಹೊಸದು ಕೂಡ ಮುಂದೆ ಮತ್ತೊಂದು ಸಂಪ್ರದಾಯಕ್ಕೆ ದಾರಿ ಮಾಡಿಕೊಡುತ್ತದೆ. ಈ ಕಲಾನುಗುಣ ಅಭಿವ್ಯಕ್ತಿಯಾಗಿ ಹೊರಬರುತ್ತದೆ ಎಂದು ಸ್ಪಷ್ಟತೆಯನ್ನು ಹೇಳಬಹುದು.[೫] ಹೀಗಾಗಿ ಕಲಾವಿದನಿಗೆ ಸೃಷ್ಟಿಯೇ ಮೊದಲ ಪ್ರೇರಣಾಶಕ್ತಿಯಾಗಿ ಹೊರಹೊಮ್ಮುತ್ತದೆ. ಒಬ್ಬ ಕಲಾವಿದನ ಸುತ್ತಮುತ್ತಲಿನ ಪರಿಸರ ಅಲ್ಲಿಯ ವಾತಾವರಣವೇ ಅವನಿಗೆ ಪ್ರೇರಣಿಭೂತವಾಗುವುದರಲ್ಲಿ ಸಂದೇಹವೆ ಇಲ್ಲ. ನಿಸರ್ಗದಲ್ಲಿ ನಿರಂತರವಾಗಿ ನಡೆಯುವ ಕ್ರಿಯೆ. ಅದೊಂದು ರಾಜಕೀಯ, ಧಾರ್ಮಿಕ, ಸಾಮಾಜಿಕ ಬದಲಾವಣೆಗಳಿಗೆ ಪ್ರತಿಕ್ರಿಯೆ ತೋರುವ ಕಾರಣವು ಕಲೆಯ ವಿಕಾಸ ಮಾರ್ಗದಲ್ಲಿ ಹಲವೊಂದು ವಿಶಿಷ್ಟ ವೈಶಿಷ್ಟ್ಯ ಎಂದು ಹೇಳಬಹುದು. ವೈಚಿತ್ರಗಳನ್ನು ಇಂದಿನ ಸಮಕಾಲೀನ ಕಲೆಯಲ್ಲಿ ಗುರುತಿಸಬಹುದಾಗಿದೆ.[೬]

ಮಾನವನ ಗತ ಇತಿಹಾಸದ ಹಿಂದೆ ಅಡಕವಾಗಿರುವ ನಿಯಮಗಳ ಜೊತೆಗೆ ಅವು ಹೇಗೆ ಆತನ ಕಾರ್ಯ ಚಟುವಟಿಕೆಗಳ ಮೇಲೆ ಪ್ರಭಾವವನ್ನು ಬಿರುತ್ತವೆಂಬುದು ಗೊತ್ತಾಗುತ್ತದೆ.[೭] ಒಬ್ಬ

೪. ಎನ್. ಮರಿಶಾಮಾಚಾರ್ : ಕಲಾಚೇತನ, ಪುಟ : ೧೮

೫. ಡಾ. ಎನ್. ಸಿ. ಪಾಟೀಲ (ಸಂ) ವರ್ಣ ಸಂಚಯ. ಪುಟ : ೪೭

೬. ಡಾ. ಎನ್. ಸಿ. ಪಾಟೀಲ (ಸಂ) ಚಿಲ್ರಕಲೆ ಮತ್ತು ಪೂರಕ ಕ್ಷೇತ್ರಗಳು ಪುಟ : ೪೦

೭. ಡಾ. ಎನ್. ಸಿ. ಪಾಟೀಲ (ಸಂ) ಚಿಲ್ರಕಲೆ ಮತ್ತು ಪೂರಕ ಕ್ಷೇತ್ರಗಳು ಪುಟ : ೩೭

ಕಲಾವಿದನಾದವನು ಅನ್ಯ ಶಾಸ್ತ್ರವನ್ನು ತನ್ನ ಚಿಂತನಶೀಲ ಎಳೆಯಾಗಿ ಹೇಗೆ ಪರಿವರ್ತಿಸಿಕೊಳ್ಳುತ್ತಾನೆ ಮತ್ತು ಈ ಬಗೆಯ ಸಪ್ತಸ್ವರಗಳಲ್ಲಿ ಸಂಚರಿಸಿತ್ತಿರುವಾಗಲೇ ಸಂವೇದನೆಗೆ ಶಕ್ತಿದಾಯಕವಾದೀತು ಎಂಬುದು ಇಲ್ಲಿ ಮುಖ್ಯವಾಗುತ್ತದೆ.[೮] ಬಣ್ಣಗಳಿಂದ ರೇಖೆಗಳು, ಆಕಾರಗಳ ಮೂಲಕ ವರ್ಣಮಯ ರೂಪವನ್ನು ತಾಳುತ್ತ ಒಂದು ವರ್ಣಶೋಭೆ ಚಿತ್ರಕಲೆಗೆ ಹೆಚ್ಚಿನ ಆಯಾಮ ಸ್ಪಷ್ಟೀಕರಿಸಿ ಪ್ರಭಾವಮಯವನ್ನು ನೀಡಿತು. ನಾವು ಬರೆಯುವ ಎಲ್ಲ ಭಾಷೆಗಳ ಅಕ್ಷರಗಳು ಸಹ ಚಿತ್ರಕಲೆಯ ಆಕಾರಗಳ ಮುದ್ರಣಾಲಯಗಳಲ್ಲದೆ ಇತೀಚೆಗೆ ಕಂಪ್ಯೂಟರ್‌ಗಳಲ್ಲಿ ಮಾಡುತ್ತಿರುವ ಚಿತ್ರಗಳು ವಿವಿಧ ಮಾದರಿಯ ಅಕ್ಷರ ವಿನ್ಯಾಸಗಳನ್ನು ಸಹ ಚಿತ್ರಕಲೆ, ಚಾಕ್ಷುಕ ಪ್ರಭಾವ ದೃಷ್ಟಿಯೇ ಕೆಲಸ ಮಾಡುತ್ತಿರುವುದನ್ನು ಗಮನಿಸಬಹುದಾಗಿದೆ.[೯]

ಕೆ. ಜ್ಞಾನೇಶ್ವರ ಅವರು ತಮ್ಮ ಪ್ರಾಥಮಿಕ ಶಿಕ್ಷಣದ ಹಂತದಲ್ಲಿಯೇ ಹಲವಾರು ರೀತಿಯ ಪ್ರಭಾವಕ್ಕೆ ಒಳಗಾಗಿ ಸೃಷ್ಟಿಯಲ್ಲಿ ತೊಡಗಿರುವುದನ್ನು ನಾವು ಕಾಣಬಹುದು. ಅವರು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಅಲ್ಲಿ ಬೇರೆ ವಿಷಯಗಳೊಂದಿಗೆ ಚಿತ್ರಕಲೆಯೂ ಕೂಡ ಕಲಿಸಲಾಗುತ್ತಿತ್ತು. ಆಗಿನ ಕಾಲದಲ್ಲಿ ಸರಕಾರಿ ಶಾಲೆಯಲ್ಲಿ ಕಡ್ಡಾಯವಾಗಿ ಈ ಚಿತ್ರಕಲೆಯನ್ನು ಕಲಿಸಲಾಗುತ್ತಿತ್ತು. ಇದಲ್ಲದೆ ಇತರ ವಿಷಯಗಳಾದ ಕ್ರಾಫ್ಟ್, ಸಂಗೀತ ಈ ವಿಷಯಗಳನ್ನು ಸಹ ಹೇಳಿಕೊಡುತ್ತಿದ್ದರು. ಹೀಗಿರುವಾಗ ನಮ್ಮ ಶಾಲೆಯಲ್ಲಿ ಡ್ರಾಯಿಂಗ್ ವಿಷಯವನ್ನು ಹೇಳಲು ಅದಕ್ಕೆಂದೆ ಒಂದು ಪ್ರತ್ಯೇಕ ಕೋಣೆ ಇತ್ತು. ದಿವಸದ ಕೊನೆಯ ಕ್ಲಾಸು ಡ್ರಾಯಿಂಗ್ ಆಗಿರುತ್ತಿತ್ತು. ಬೇರೆ ತರಗತಿಗಳನ್ನು ಮುಗಿಸಿಕೊಂಡು ಸಂಜೆಯ ವೇಳೆಗೆ ಮನೆಗೆ ಸ್ನೇಹಿತರ ಜೊತೆಗೆ ಹೋಗುತ್ತಿದ್ದೆವು. ಮನೆಯಲ್ಲಿ ತಾತ ಮತ್ತು ತಂದೆ ನಮ್ಮ ಮುತ್ತಾತ ಇಬ್ಬರು ಕಲಾವಿದರು. ಅವರು ಮಾಡುತ್ತಿದ್ದ ಕಲಾಕೃತಿಗಳನ್ನು ನೋಡುತ್ತ ಅವರ ಜೊತೆಯಲ್ಲಿ ಕುಳಿತುಕೊಳ್ಳುತ್ತಿದ್ದರು. ಸ್ನೇಹಿತರು ಆಟವಾಡಲು ಕರೆದರು ಅವರು ಮಾತ್ರ ಆಟವನ್ನು ಸ್ವಲ್ಪ ಆಡಿ ಮತ್ತೇ ತಾತನ ಹತ್ತಿರದಲ್ಲಿ ಇದ್ದು ಕಲಾಕೃತಿಗಳ ರಚನೆ ಮಾಡುತ್ತಿರುವುದನ್ನು ವೀಕ್ಷಿಸುತ್ತ ಇರುತ್ತಿದ್ದೆ.[೧೦]

ನಮ್ಮ ಮುತ್ತಾತ ತಿಪ್ಪಾಜಪ್ಪ ಅವರ ಚಿತ್ರಗಳನ್ನು ಮತ್ತು ಶಿಲ್ಪಗಳನ್ನು ರಚಿಸುತ್ತಿದ್ದರು. ಅದರಲ್ಲಿ ನಮ್ಮ ಮುತ್ತತನಿಗೆ ಸಾಂಪ್ರದಾಯಿಕ ಶೈಲಿಯ ಚಿತ್ರಗಳು ಮತ್ತು ಶಿಲ್ಪಗಳು ಎಂದರೆ ತುಂಬಾ ಇಷ್ಟ. ಆದ್ದರಿಂದ ಹೆಚ್ಚಾಗಿ ಸಾಂಪ್ರದಾಯಿಕ ಕಲಾಶೈಲಿಯನ್ನು ತಮ್ಮ ಕಲಾಕೃತಿಗಳಲ್ಲಿ ಬಳಸುತ್ತಿದ್ದರು ಮತ್ತು ಆಗ ಇನ್ನೂ ಕ್ಯಾಮರಗಳು ಇರಲಿಲ್ಲ. ಆದ ಕಾರಣದಿಂದ ಶ್ರೀಮಂತ ಮನೆತನದವರು ತಿಪ್ಪಜಿಯವರಲ್ಲಿ ಬಂದು ತಮ್ಮ ಭಾವಚಿತ್ರಗಳನ್ನು ಚಿತ್ರಿಸಲು ಕೊಲ್ಲುತ್ತಿದ್ದರು. ಕಂಚು, ಹಿತ್ತಾಳೆ, ಕಲ್ಲು ಮತ್ತು ಕಾಷ್ಠ ಮುಂತಾದ ಮಾಧ್ಯಮಗಳಲ್ಲಿ ಶಿಲ್ಪರಚನೆಯನ್ನು ತಿಪ್ಪಾಜಿಯವರು ಮಾಡುವುದು

೮. ಡಾ. ಎನ್. ಸಿ. ಪಾಟೀಲ (ಸಂ) ಚಿಲ್ಪಕಲೆ ಮತ್ತು ಪೂರಕ ಕ್ಷೇತ್ರಗಳು ಪುಟ : ೧೨೩
೯. ಡಾ. ಶಿವರಾಮ ಕಾರಂತ : ಕಲಾ ಪ್ರಪಂಚ, ಪುಟ : ೧೫೯
೧೦. ಕಲಾವಿದರಾದ ಜ್ಞಾನೇಶ್ವರವರೊಂದಿಗೆ ಸಂದರ್ಶನ,

ಅವರಿಗೆ ಸುಲಭದ ಕೆಲಸವಾಗಿತ್ತು. ಮತ್ತು ಅದರಂತೆ ಅನೇಕ ಕಡೆಗಳಲ್ಲಿ ಚಿತ್ರ ರಚನೆಯನ್ನು ಮಾಡಿದ್ದು. ಅದೇ ರೀತಿ ಶಿಲ್ಪಗಳನ್ನು ಸಹ ರಚಿದ್ದಾರೆ.[೧೧] ಇಂತಹ ಒಬ್ಬ ಮಹಾನ್ ಕಲಾವಿದ ಅದು ಮಲೆನಾಡಿನ ಮೊದಲ ಹಿರಿಯ ಕಲಾವಿದರೆಂದು ಕರೆಯಲ್ಪಡುವ ತಿಪ್ಪಾಜಿಯವರ ಮೊಮ್ಮಗ ಕೆ. ಜ್ಞಾನೇಶ್ವರ ಅವರು ಬಾಲ್ಯದಿಂದ ಕಲಾಕೃತಿಗಳನ್ನು ರಚಿಸುವುದನ್ನು ನೋಡುತ್ತ ಬೆಳೆದರು. ಕಲೆಯನ್ನು ಅವರು ಸಹ ಕಲಿಯಬೇಕು ಎಂದು ಜ್ಞಾನೇಶ್ವರ ಅವರು ಆಸಕ್ತಿಯಿಂದ ಕಲೆಯಲ್ಲಿ ಮತ್ತು ಅವರಿಗೆ ಪ್ರೋತ್ಸಾಹ, ಪ್ರೇರಣೆ, ಪ್ರಭಾವ ಬೀರಿದ್ದು ಅವರ ಮುತ್ತಾತ ತಿಪ್ಪಾಜಿಯವರು ಎಂದು ಹೇಳುತ್ತಾರೆ.

ಅದೇರೀತಿಯಾಗಿ ನಮ್ಮ ತಾತ ಪರಶುರಾಮಪ್ಪನವರು ಸಹ ಶಿಲ್ಪ ಕಲಾವಿದರು ಅವರ ಜೊತೆಯಲ್ಲೂ ಸಹ ಕಲೆಯ ನಿಲುವುಗಳನ್ನು ಕಂಡುಕೊಂಡೆ ಎಂದು ಹೇಳಿಸುತ್ತಾರೆ. ಜ್ಞಾನೇಶ್ವರ ಅವರು ಅದೇ ರೀತಿಯಾಗಿ ಅವರ ತಂದೆ ಕೃಷ್ಣರಾವ್ ಅವರು ಲಿಥೋಪ್ರಿಂಟನ್ನು ನಡೆಸುತ್ತಿದ್ದರು. ಒಟ್ಟಾರೆ ಹೇಳಬೇಕೆಂದರೆ ಕಲೆಯನ್ನು ಬಿಟ್ಟು ನಮ್ಮ ಮನೆತನ ಇಲ್ಲ, ಮನೆತನವನ್ನು ಬಿಟ್ಟು ಕಲೆ ಇಲ್ಲ ಎನ್ನುವ ರೀತಿಯಲ್ಲಿ ನಮ್ಮ ವಂಶಸ್ಥರಿಂದ ಬೆಳೆದುಕೊಂಡು ಬಂದ ಒಂದು ವಿಧ್ಯ ಕಲೆ ಎಂದೇ ಹೇಳಬಹುದು. ಕೆ. ಜ್ಞಾನೇಶ್ವರ ಅವರ ಜೊತೆಯಲ್ಲಿ ಬೆಳೆದ ಅಣ್ಣ ಕಾಶೀನಾಥ ಅವರು ಮತ್ತು ತಮ್ಮ ನಾರಾಯಣರವರು ಸಹ ಕಲೆಯಲ್ಲಿ ತುಂಬಾ ಆಸಕ್ತಿಯನ್ನು ತೋರುತ್ತಿದ್ದರು.[೧೨] ಎಲ್ಲರು ಬಾಲ್ಯದಿಂದಲೇ ಕಲೆಯ ಹಾದಿಯಲ್ಲಿ ನಡೆದು ಬಂದವರೆ ಆಗಿದ್ದಾರೆ. ಈಗ ಖ್ಯಾತ ಕಲಾವಿದರಾಗಿ ತಮ್ಮ ವಂಶದ ಗೌರವವನ್ನು ಕಾಪಾಡಿಕೊಂಡ ಬಂದಂತಹ ಕಲಾಕುಟುಂಬವೆಂದು ಹೇಳಬಹುದು.

ಇಂತಹ ಪ್ರಭಾವದಿಂದ ಯಾವುದೇ ಕಲಾಕೃತಿ ರಚನೆಯಾಗಿದ್ದರು. ರಚಿಸಿಕೊಡುವ ಆತ್ಮವಿಶ್ವಾಸ ಇವರಲ್ಲಿ ಬೆಳೆದುಬರುತ್ತದೆ ಎಂದು ಹೇಳುವಂತೆ ಕಾಲ ಕಲಾವಿದನ ಸಂವೇದನೆಯನ್ನು ಹೆಚ್ಚಾಗಿ ಬದಲಿಸಬಲ್ಲದು. ಸಂವೇದನೆ ತನ್ನಷ್ಟಕ್ಕೆ ತಾನೆ ಬದಲಾಗುವುದು ಅಥವಾ ಕಲಾವಿಧನ Inner acsthetic Senc ಎನ್ನಬಹುದು. ಇಲ್ಲಿ ಸಂವೇದನೆ ಅಥವಾ Sensibility ಎಂಬ ಪದವನ್ನು ವಿಶಾಲ ಆಳವಾದ ಅರ್ಥ ಹೊಂದಿರುವ ಪದವಾಗಿ ಅತ್ಯುನ್ನತ ಬೆಳವಣಿಗೆ ಹಂತ ತಲುಪಿದ ಭಾವನಾತ್ಮಕ ಮತ್ತು ಭೌದ್ದಿಕ ಗ್ರಹಿಕೆ ಮತ್ತು ಮುಖ್ಯವಾಗಿ ಪಕ್ವಗೊಂಡ ಅಥವಾ ಸುಸಂಸ್ಕೃತ ಅಭಿರುಚಿಯ ಅತಿಶಯಕ್ಕೆ ಪ್ರತಿಕ್ರಿಯೆ ರೂಪವಾಗಿ ಹಾಗೂ ಕಲಾವಿದನೊಬ್ಬನಲ್ಲಿ ಅನಿಸಿಕೊಳ್ಳುವ ಒಂದು ಅನುಭವ ಎಂಬ ಗ್ರಹಿಕೆಯ ರೂಪದಲ್ಲಿ ದುಡಿಸಿಕೊಳ್ಳುತ್ತದೆ.

ಸಂವೇಧನೆಯ ನೆಲೆಗಳು ಬದುಕಿನ ವೈವಿಧ್ಯಮಯ ಮಜಲುಗಳ ಪ್ರಭಾವದಿಂದ ಬದಲಾಗುವ ಒಬ್ಬನೇ ಕಲಾವಿದ ತನ್ನ ವಿವಿಧ ಘಟನೆಗಳಲ್ಲಿ ವಿಭಿನ್ನ ಸಂವೇದನೆಗಳಿಗೆ ಒಳಗಾಗಿ ವೈವಿಧ್ಯಮಯವಾಗಿ ಸೃಷ್ಟಿಸುವಂತೆ ಮಾಡಬಲ್ಲವು. ಕಲಾವಿದನಾಗಲಿ ಬೇರೆ ಯಾರೇ ಆಗಲಿ ಅವನು ಒಂದು ಸಮಾಜದಲ್ಲಿ

---

೧೧. ಕಲಾವಿದರಾದ ಜ್ಞಾನೇಶ್ವರವರೊಂದಿಗೆ ಸಂದರ್ಶನ.

೧೨. ಕಲಾವಿದರಾದ ಜ್ಞಾನೇಶ್ವರವರೊಂದಿಗೆ ಸಂದರ್ಶನ.

ಬೆಳೆಯಬೇಕು ಎಂದರೇ ಕಲಾವಿದನಾದವನು ಯಾವ ಸಮಾಜದಲ್ಲಿ ಬೆಳೆಯುತ್ತಾನೋ ಆ ಸಮಾಜದಿಂದ ಆತ ಸಾಕಷ್ಟು ಪ್ರಭಾವಿತನಾಗಿರುತ್ತಾನೆ ಹಾಗೂ ತನ್ನ ಕೃತಿಯ ಮೂಲಕ ಅವನು ವ್ಯಕ್ತಪಡಿಸುತ್ತಾನೆ. ಕಲಾವಿದ ವಿಚಾರಾತ್ಮಕ ದೃಷ್ಟಿ ಎಷ್ಟು ಬೆಳೆಯುತ್ತದೆ. ಅದರಿಂದ ಅಷ್ಟು ಗಾಢವಾದ ಚಿತ್ರ ರಚಿಸುತ್ತಾನೆ.[೧೩] ಲಲಿತಕಲೆಗಳಲ್ಲೊಂದಾದ ಚಿತ್ರಕಲೆ ತತ್‌ಕ್ಷಣಕ್ಕೆ ಕಣ್ಣಿಗೆ ಮುದವನ್ನು ನೀಡುತ್ತಾ ನಮ್ಮ ಭಾವಪ್ರಪಂಚವನ್ನು ಸೇರಿಸಿಕೊಳ್ಳುತ್ತದೆ. ಅಂತರಂಗದಲ್ಲಿ ಅದರ ಭಾವ ಸೌಂದರ್ಯ ಮತ್ತು ಆಂತರಿಕ ಅರ್ಥಗಳು ಬಹುಕಾಲದವರೆಗೆ ಉಳಿದು ಬಿಡುತ್ತದೆ. ಈ ದೃಶ್ಯ ಪ್ರಪಂಚದಲ್ಲಿ ಸೃಷ್ಟಿಕರ್ತನ ಒಂದು ಚಿತ್ರಶಾಲೆಯೆ ಆಗಿದ್ದು ನಾವು ಕಣ್ಣು ತೆರೆದರೆ ಸಾಕು ಚಿತ್ರವೊಂದು ನಮ್ಮ ಕಣ್ಮುಂದೆ ನಿಂತುಬಿಡುತ್ತದೆ. ಚಿತ್ರಕಲಾವಿದನು ರೇಖೆ ಹಾಗೂ ಬಣ್ಣಗಳಿಂದ ಒಂದು ವಿಶಿಷ್ಟವಾದ ವಸ್ತುವಿನ ಅನುಭವವನ್ನು ತಮ್ಮ ಮುಂದಿಟ್ಟು ಅಚ್ಚರಿಗೊಳಿಸುವನು. ಹಾಗೆಯೇ ಆನಂದವನ್ನುಂಟು ಮಾಡುವನು. ಕೆಲವು ಚಿತ್ರಗಳು ನಮ್ಮನ್ನು ತನ್ಮಯಗೊಳಿಸಿ ಸಮಾಧಿಸಕ್ತರನ್ನಾಗಿ ಮಾಡುವ ಸಾಮರ್ಥ್ಯವನ್ನು ಹೊಂದಿರುತ್ತವೆ. ಆಗಿನ ಅನುಭವ ಅವರ್ಣನೀಯವೂ ಆಗುತ್ತದೆ. ಹೀಗಾಗಿ ಅವನು ಒಂದು ಸಮಾಜದ ಇಲ್ಲವೇ ಆ ವಾತಾವರಣದ ಮೂಲಕ ಪ್ರಭಾವಗೊಂಡು ಕಲಾಕ್ರಿಯೆಯಲ್ಲಿ ತಲ್ಲೀನನಾಗುತ್ತಾನೆ.[೧೪]

**ಪ್ರಭಾವ – ಪ್ರೇರಣೆ**

ಜ್ಞಾನೇಶ್ವರವರು ಕಲಾಕಾರನಿಗೆ ಅನೇಕ ವಿಧದಲ್ಲಿ ಪ್ರಭಾವ, ಪ್ರೇರಣೆ ದೊರಕುವುದುಂಟು ಕೆಲವೊಮ್ಮೆ ಪ್ರತ್ಯಕ್ಷವಾಗಿ, ಕೆಲವೊಮ್ಮೆ ಪರೋಕ್ಷವಾಗಿ ಆದರೆ ಕಲಾಕಾರನ ಮನಸ್ಸು, ಬುದ್ಧಿಶಕ್ತಿ ಸರ್ವದಾ ಜಾಗೃತವಾಗಿದ್ದು. ಸಂವೇದನಾ ಶೀಲವಾಗಿರಬೇಕು ಎನ್ನುವುದಂತೂ ಅತ್ಯಾವಶ್ಯಕ. ಸಮಾಜದ ಕೋಟಲೆ, ಸಂಘರ್ಷ, ನಿರಾಶೆ ಹಾಗೂ ಉಲ್ಲಾಸ ದ್ವಂದ್ವ ಇವೆಲ್ಲವೂ ಕಲಾವಿದನ ಸಂವೇದನಾಶೀಲ ಮನಸ್ಸನ್ನು ಉತ್ತೇಜಿಸಲು ಸಮರ್ಥವಾಗುತ್ತವೆ[೧೫] ಮಾನವನ ಜೀವನ ಮುಖ್ಯವಾಗಿ ತನು–ಮನ ಆತ್ಮಗಳೆಂಬ ಮೂರು ಅಂಶಗಳನ್ನು ಹೊಂದಿದೆ. ಶಿಕ್ಷಣವು ಇವುಗಳನ್ನು ಸಂಸ್ಕರಿಸುವ ಕಾರ್ಯವನ್ನು ಸದಾಕಾಲವೂ ಮಾಡುತ್ತಿದೆ. ತನುವಿಗೆ ಬೇಕಾದ ಆಸನ, ವಸತಿ, ಸಂಸ್ಕಾರಕ್ಕೆ ಬೇಕಾದ ಉಪಜೀವನ ಮಾರ್ಗವನ್ನು ಮನಸ್ಸಿನ ವಿಕಾಸಕ್ಕೆ ಸಾಹಿತ್ಯ ಕಲೆ, ನೈತಿಕ ಮೌಲ್ಯಗಳನ್ನು ಆತ್ಮದ ಉದ್ದಾರಕ್ಕೂ ಧರ್ಮ, ಆಧ್ಯಾತ್ಮ ಪರಮಾರ್ಥಿಕ ಮೌಲ್ಯಗಳನ್ನು ಕೊಡಬಲ್ಲುದು ನಿಜವಾದ ಶಿಕ್ಷಣ ಈ ರೀತಿಯ ವಿದ್ಯಾಪ್ರಸಾರದಿಂದ ಕರ, ಉರ, ಶಿರ ಸಂವರ್ಧನೆಯಾಗುವುದು, ಅರಿವು ಕಾರ್ಯವನ್ನು, ಉರಿವು ಹೃದಯವನ್ನು, ಶಿರವು ಅರಿವನ್ನು ಸೃಷ್ಟಿಸುತ್ತದೆ. ಶಿಕ್ಷಣವು ದೇಹಕ್ಕೆ ಪುಷ್ಠಿಯನ್ನು ಮನಕ್ಕೆ ವೈಶಾಲ್ಯತೆಯನ್ನು, ಆತ್ಮಕ್ಕೆ ಆನಂದವನ್ನು, ಕೊಟ್ಟು ಅಂತ:ಕರಣವನ್ನು ಅರಳಿಸಿ ಸದ್ಗುಣವನ್ನು ಮೈಗೂಡಿಸಿಕೊಂಡು ಬರಲು ಇದು ಪ್ರೇರಣೆಯನ್ನು ನೀಡುತ್ತದೆ.[೧೬]

೧೩. ಎನ್. ಮರಿಶಾಮಾಚಾರ್ : ಕೆ.ಕೆ. ಹೆಬ್ಬಾರ, ಪುಟ : ೬೦
೧೪. ಡಾ. ಎನ್. ಸಿ. ಪಾಟೀಲ (ಸಂ) ಚಿಲಕಲೆ ಮತ್ತು ಪೂರಕ ಕ್ಷೇತ್ರಗಳು ಪುಟ : ೧೦೧
೧೫. ಡಾ. ಎನ್. ಸಿ. ಪಾಟೀಲ (ಸಂ) ಚಿಲಕಲೆ ಮತ್ತು ಪೂರಕ ಕ್ಷೇತ್ರಗಳು ಪುಟ : ೧೦೧
೧೬. ಎನ್. ಮರಿಶಾಮಾಚಾರ್ : ಕೆ.ಕೆ. ಹೆಬ್ಬಾರ, ಪುಟ : ೧೭

ಕೆ. ಜ್ಞಾನೇಶ್ವರ ಅವರು ಬಾಲ್ಯದಿಂದಲೆ ಕಲೆಯ ಅಭಿರುಚಿಯನ್ನು ಹೊಂದಿದವರು ಇವರು ಪ್ರಾಥಮಿಕ ಶಿಕ್ಷಣದ ಹಂತದಲ್ಲಿಯೆ ಕಲೆಯ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಕಂಡುಕೊಂಡವರು ಕಲೆಯು ಇವರ ಮನೆತನಕ್ಕೆ ವಂಶಪಾರಂಗತವಾಗಿ ಬಂದದ್ದು ಅವರ ಮುತ್ತಾತ ತಿಪ್ಪಾಜಿ ಅವರು ಮತ್ತು ತಾತ ಪರಶುರಾಮಪ್ಪ, ತಂದೆ ಕೃಷ್ಣರಾವ್ ಅವರು ಶಿಲ್ಪ ಮತ್ತು ಚಿತ್ರಕಲಾವಿದರು ಈ ರೀತಿಯ ಒಂದು ವಾತಾವರಣದಲ್ಲಿ ಇರುವ ಕೆ. ಜ್ಞಾನೇಶ್ವರ ಅವರು ಅವರ ಮುತ್ತಾತ, ತಾತ, ಅಪ್ಪ ಇವೇ ಪ್ರಭಾವ ಕೆ. ಜ್ಞಾನೇಶ್ವರ ಅವರು ಕಲಾವಿದರಾಗಲು ಕಾರಣ. ಹೀಗಾಗಿ ಮನೆಯಲ್ಲಿ ಎಲ್ಲರೂ ಕಲೆಯ ಬಗ್ಗೆ ತಿಳುವಳಿಕೆ ಇರುವವರೆ ಆಗಿದ್ದರು. ಅದಕ್ಕೆ ಕೆ.ಜ್ಞಾನೇಶ್ವರ ಅವರಿಗೆ ಅಲ್ಲಿಯ ಕಲಾವಾತಾವರಣವು ಅವರ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತು[೧೭] ಎಂಬುದನ್ನು ತಿಳಿದುಕೊಳ್ಳಲಾಗಿದೆ. ಕೆ. ಜ್ಞಾನೇಶ್ವರ ಅವರು ಪ್ರಾಥಮಿಕ ಹಂತದ ಕಲಾ ಶಿಕ್ಷಣವನ್ನು ಪಡೆಯುತ್ತಬಂದರು. ಮನೆಯಲ್ಲಿಯು ಸಹ ಕಲೆಯ ಅಭ್ಯಾಸವನ್ನು ಮಾಡುತ್ತಿದ್ದರು.

ಕೆ. ಜ್ಞಾನೇಶ್ವರ ಅವರಿಗೆ ಕಲೆಯನ್ನು ಕಲಿಯುವ ಆಸಕ್ತಿ ಇತ್ತು. ಅವರು ಬಿ.ಎಫ್.ಎ. ಯನ್ನು ಮಾಡುತ್ತಿರುವಾಗ ಹುಬ್ಬಳ್ಳಿಯ ವಿಜಯಮಹಾಂತೇಶ ಕಾಲೇಜಿನಲ್ಲಿಯು ಕೆ. ಜ್ಞಾನೇಶ್ವರ ಅವರಿಗೆ ಹಳೆಜೋಳ್ ಎಂಬ ಗುರುಗಳು ದೊರೆತಿದ್ದರು. ಅವರ ಮಾರ್ಗದರ್ಶನದಲ್ಲಿ ಹೆಚ್ಚಿನ ಕಲಾಶಿಕ್ಷಣವನ್ನು ಪಡೆದರು. ಹಾಗೂ ಗುರುಗಳಾದ ಹಳೆಜೋಳ್‌ರವರ ಅಚ್ಚುಮೆಚ್ಚಿನ ಶಿಷ್ಯರಾಗಿದ್ದರು. ಕೆ. ಜ್ಞಾನೇಶ್ವರ ಅವರು ಹಾಗೂ ಅವರ ಕಲಾಭಿರುಚಿಯನ್ನು ಕಂಡು ಇವರಿಗೆ ಚಿತ್ರಕಲೆಯ ಬಗ್ಗೆ ಆಳವಾದ ಜ್ಞಾನವನ್ನು ತುಂಬುತ್ತಾ ಒಂದು ರೀತಿಯ ಪ್ರಭಾವವನ್ನು ಮತ್ತು ಪ್ರೇರಣೆಯನ್ನು ನೀಡಿದವರಲ್ಲಿ ಹಳೆಜೋಳರವರು ಒಬ್ಬರು ಎಂದು ಹೇಳಬಹುದು. ಒಂದು ರೀತಿಯಲ್ಲಿ ಈ ಪ್ರಭಾವ ಪ್ರೇರಣೆಯು ಮನುಷ್ಯನ ಮಾನಸಿಕವಾದ ಶಕ್ತಿಗೆ ಚೈತನ್ಯವನ್ನು ತುಂಬುವುದು. ಇದರಿಂದ ಅವನು ತನ್ನ ಕ್ಷೇತ್ರದಲ್ಲಿ ವ್ಯಾಪಕವಾಗಿ ಬೆಳೆಯಲು ದಾರಿಯನ್ನು ಕಂಡುಕೊಳ್ಳುತ್ತಾನೆ. ಇದು ಯಾವುದೆ ಕ್ಷೇತ್ರಕ್ಕೆ ಸಂಬಂಧಪಟ್ಟಿಲ್ಲ. ಹೇಳಿ ಎಲ್ಲ ಕ್ಷೇತ್ರಗಳಿಗೂ ಅನ್ವಯಿಸುತ್ತದೆ. ಚಿತ್ರಕಲಾ ಕ್ಷೇತ್ರವು ಇದಕ್ಕೆ ಹೊರತಾಗಿಲ್ಲ, ಒಬ್ಬ ಕಲಾವಿದ ಒಂದು ಹಂತವನ್ನು ತಲುಪಿಸಬೇಕಾದರೆ ಅವನ ಹಿಂದೆ ಯಾವ ರೀತಿಯಿಂದಲೂ ಪ್ರಭಾವ, ಪ್ರೇರಣೆ ಇದ್ದೇ ಇರುತ್ತದೆ. ಪ್ರಭಾವ, ಪ್ರೇರಣೆಯು ಕಣ್ಣಿಗೆ ಕಾಣದ ಅಂತರ್ಮುಖಿಯಾದರೂ ಬಾಹ್ಯ ಪ್ರಚೋಧನೆಗೆ ಹೆಚ್ಚು ಸಹಕಾರಿಯಾಗಬಲ್ಲದು, ಕಲಾವಿದನಾದವನು ಕೆಲವು ಸಾರಿ ತನ್ನ ಸುತ್ತ–ಮುತ್ತಲಿನ ಪರಿಸರದಿಂದಲು ವಾತಾವರಣದಿಂದಲು ಪ್ರಭಾವ ಪ್ರೇರಣೆಯನ್ನು ಪಡೆಯುತ್ತಾನೆ. ಕಲಾವಿದ ತಾನು ಹುಟ್ಟಿದ ಬೆಳೆದ ಪರಿಸರದಿಂದ ಪ್ರಭಾವಿತಗೊಳ್ಳುವನಲ್ಲದೇ ಅದರಿಂದ ಪ್ರಭಾವ ಪ್ರೇರಣೆಯನ್ನು ಪಡೆಯುತ್ತಾನೆ. ಕೆ. ಜ್ಞಾನೇಶ್ವರ ಅವರಿಗೆ ಅನೇಕ ಪ್ರಭಾವ ಪ್ರೇರಣೆಯನ್ನು ದೊರಕಿದ್ದುಂಟು ಎಂದು ಕೆ. ಜ್ಞಾನೇಶ್ವರ ಅವರೆ ಹೇಳುತ್ತಾರೆ.[೧೮]

೧೭. ಕಲಾವಿದ ಜ್ಞಾನೇಶ್ವರರೊಂದಿಗೆ ಸಂದರ್ಶನ
೧೮. ಕಲಾವಿದ ಜ್ಞಾನೇಶ್ವರರೊಂದಿಗೆ ಸಂದರ್ಶನ

ಇನ್ನೂ ಹೇಳಬೇಕೆಂದರೆ ಪ್ರಾಥಮಿಕ ಹಂತದಲ್ಲಿ ಕಲೆಯಲ್ಲಿ ಆಸಕ್ತಿ ಹೊಂದಿದ ಕೆ. ಜ್ಞಾನೇಶ್ವರ ಅವರ ಹಂತ-ಹಂತವಾಗಿ ಒಳ್ಳೆಯ ಗುರುಗಳು ಮತ್ತು ಅವರ ಮನೆತನದಲ್ಲಿಯೇ ಅವರ ಮುತ್ತಾತ ತಿಪ್ಪಾಜಿ ಅವರು ಮತ್ತು ತಾತ ಪರುಶುರಾಮಪ್ಪನವರ ತಂದೆ ಕೃಷ್ಣರಾವೊಂದಿಗೆ ಕಲೆಯ ಪೂರ್ತಿ ತಿಳುವಳಿಕೆಯನ್ನು ಪಡೆದುಕೊಂಡರು.

ಹೆಚ್ಚಿನ ಕಲಾಶಿಕ್ಷಣವನ್ನು ಪಡೆಯಲು ಹುಬ್ಬಳ್ಳಿಯ ವಿಜಯಮಹಾಂತೇಶ ಶಾಲಾ ಕಾಲೇಜಿಗೆ ಹೋದಲ್ಲಿಯ ಕೆ. ಜ್ಞಾನೇಶ್ವರ ಅವರಿಗೆ ಒಳ್ಳೆಯ ಕಲೆಯ ಜ್ಞಾನವನ್ನು ಹೊಂದಿರುವ ಗುರುಗಳು ದೊರೆತರು. ಅವರ ಅಧ್ಯಯನಕ್ಕೆ ಅವರ ಕಾರ್ಯಕ್ಷೇತ್ರದ ವಿಸ್ತರಣಕ್ಕೆ ಇವು ಒಳ್ಳೆಯ ಉತ್ತಮ ಭೂಮಿಕೆಯಾಗಿ ಪರಿಣಮಿಸಿದವು. ತಮ್ಮ ವ್ಯಾಸಂಗವನ್ನು ಈ ಕ್ಷೇತ್ರದಲ್ಲಿ ಇನ್ನು ಮುಂದುವರಿಸಬೇಕು. ಉನ್ನತಗೊಳಿಸಿಕೊಳ್ಳಬೇಕು ಎಂಬ ಮಹೋನ್ನತ ಧ್ಯೇಯವನ್ನು ಅವರು ಹೊಂದಿದ್ದರು.

ಕೆ. ಜ್ಞಾನೇಶ್ವರ ಅವರು ತಮ್ಮ ಸಹಪಾಠಿಗಳೊಂದಿಗೆ ತಮ್ಮ ಆಸಕ್ತಿಗಳನ್ನು ತೋಡಿಕೊಳ್ಳುತ್ತಿದ್ದರು. ಇದರ ಜೊತೆಗೆ ಮನೆಯ ಎಲ್ಲಾ ಸದಸ್ಯರು ಮತ್ತು ಅವರ ಗುರುಗಳು ಕೆ. ಜ್ಞಾನೇಶ್ವರ ಅವರ ಕಲೆಗೆ ತುಂಬ ಪ್ರಭಾವ ಹಾಗೂ ಪ್ರೇರಣೆ, ಪ್ರೋತ್ಸಾಹ ನೀಡಿದ್ದನ್ನು ಕೆ.ಜ್ಞಾನೇಶ್ವರ ಅವರು ಯಾವಾಗಲು ನೆನೆಯುತ್ತಿದ್ದರೆಂಬುದು ಇವರ ಬಗ್ಗೆ ಅವರಲ್ಲಿದ್ದ ಕೃತಜ್ಞತಾಭಾವಕ್ಕೆ ನಿದರ್ಶನವೆನಿಸುವುದು. ಅಂತೆಯೇ ಅವರನೆಲ್ಲಾ ತಮ್ಮ ಜೀವನದಲ್ಲಿ ನೆನೆಯುತ್ತ ಕಲೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ.

ಕಲೆಯು ಮೂಲತಃ ಮಾನವನ ಸೃಷ್ಟಿ ಅದು ಪ್ರತಿಭಾನ್ವಿತ ಮಾನವನ ಜೀವನನುಭವ ಅಭಿವ್ಯಕ್ತಿ ಕಲೆ ಮಾನವತೆಯ ವಿಶಿಷ್ಟ ಆನಂದದಾಯಕಯಾದ ಮಾತೃಶಕ್ತಿ, ಭೌತಿಕ ಜಗತ್ತಿನ ಬಾಹ್ಯ ಸೃಷ್ಟಿಗಿಂತ ಹೆಚ್ಚಾಗಿ ಮಾನವನ ಆಂತರಿಕ ನಿತ್ಯ, ಸತ್ಯ, ಕಲೆ ವಿವಿಧ ಮಾಧ್ಯಮಗಳಲ್ಲಿ ಹೊಮ್ಮಿ ಸಮಾಜದ ಹೃದಯವಂತಿಕೆಯನ್ನು ಆಗು ಮಾಡುತ್ತದೆ.[೧೯] ಯಾವುದೇ ಒಂದು ನಾಡಿನ ಜನಾಂಗ ವರ್ಗದ ಬದುಕಿನ ಬೆಳವಣಿಗೆಯ ಪರಂಪರೆ ಹಾಗೂ ಸಂಪ್ರದಾಯಗಳನ್ನು ತಿಳಿಯಬೇಕಾದರೆ ಅವರ ಪರಿಸರದಲ್ಲಿ ಜೀವ ಪಡೆದಿರುವ ಕಲೆಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಮಾನವನ ಸಾಂಸ್ಕೃತಿಕ ಲೋಕದ ಪ್ರತಿಹಂತದಲ್ಲೂ ಕಲೆ ಪ್ರೇರಣೆಯ ವಸ್ತು ಆಗಿರುತ್ತದೆ. ಕಲಾವಿದನಿಗೆ ಪ್ರಕೃತಿಯು ಪ್ರೇರಣೆಯನ್ನು ನೀಡಬಲ್ಲದು. ಅಲ್ಲದೆ ಅದು ಒಂದೊಂದು ಸವಾಲನ್ನು ಎದುರಿಸುವ ಸಂದರ್ಭವನ್ನು ಸೃಷ್ಟಿಸುತ್ತದೆ. A greatest past of my easly year was spent in observing the world of nature it gave me, intense joy to watch thing ಎಂದು ಪ್ರಕೃತಿಯನ್ನು ಕುರಿತು ಪತ್ರವೊಂದರಲ್ಲಿ ಮಿತ್ರರೊಬ್ಬರಿಗೆ ರವೀಂದ್ರರು ಹೇಳುತ್ತಾರೆ.[೨೦] ಆ ಪತ್ರದ ಅಂತಿಮ ಸಾಲುಗಳನ್ನು ಪ್ರಕೃತಿಯ ಸೌಂದರ್ಯವನ್ನು, It's the joy of every man face to face with beauty ಎಂದು ಹೆಳುತ್ತಾರೆ. ಬಹುಶಃ ಕಲಾ

೧೯. ಕೆ.ವಿ. ಸುಬ್ರಮಣ್ಯಂ : ಕಲಾ ಸಂವೇದನೆಯ ಒಳನೋಟಗಳು ಪುಟ : ೮೩
೨೦. ಕೆ.ವಿ. ಸುಬ್ರಮಣ್ಯಂ. ಕಲಾ ಸಂವೇದನೆಯ ಒಳನೋಟಗಳು ಪುಟ : ೮೪

ಇತಿಹಾಸದಲ್ಲಿ ಸರಿಹೋಗುವ ಬಹುತೇಕ ಕಲಾವಿದರು ಪ್ರಕೃತಿಯಿಂದಲೇ ಮತ್ತು ಅದನ್ನು ನಕಲು ಮಾಡುವುದರಿಂದಲೇ ಅಲ್ಲದೆ ಅದರ ಪ್ರೇರಣೆಯಿಂದಲೇ ಚಿತ್ರಕಲೆಯ ಮೂಲ ಪಾಠಗಳನ್ನು ಕಲಿತರು.[೨೧] There is of nature whose in face we all seand feel.[೨೨]

## ಶೈಲಿ ಮತ್ತು ತಂತ್ರಗಾರಿಕೆ

ಚಿತ್ರರಚನೆಯ ಕಾಲದಲ್ಲಿ ಕಲಾವಿದನಿಗೆ ಗೊತ್ತಿರುವ ಮನಸ್ಸಿನ ಭಾವನೆಗಳಂತೆ ಅವನ ಕಲಾಕೌಶಲ್ಯ ಕೂಡಾ ಬದಲಾಗುತ್ತದೆ. ಒಂದೊಂದು ಬಗೆಯ ವಿಚಾರಗಳನ್ನು ತಿಳಿಸಲು ಒಂದೊಂದು ಬಗೆಯ ಕೌಶಲ್ಯ ಹಾಗೂ ಶೈಲಿ ಬೇಕಾಗಬಹುದು. ಅದನ್ನು ಕಲಾವಿದ ತಾನಾಗಿಯೇ ತನ್ನ ಮನಸ್ಸಿನಿಂದ ಭಾವನೆಗಳಿಗೆ ರೂಪಕೊಡಲು ಯೋಗ್ಯವೆನಿಸುವ ಶೈಲಿಯನ್ನು ರೂಪಿಸಿ ಗುರುತಿಸಿಕೊಳ್ಳಬೇಕಾಗುತ್ತದೆ. ಈ ಅಭಿಪ್ರಾಯದಂತೆ ಕೆ. ಜ್ಞಾನೇಶ್ವರ ಅವರ ಸಮಗ್ರ ಕಲಾಕೃತಿಗಳ ಅಧ್ಯಯನ ಮಾಡಿದಾಗ ಮೊದ ಮೊದಲು ತಮ್ಮ ಮುತ್ತಾತ ತಿಪ್ಪಾಜಿ ಅವರು ರಚಿಸುವ ಕಲಾಕೃತಿಗಳ ವಿಧಾನವನ್ನು ನೋಡುತ್ತ ಅವರ ಕಲಾಶಿಕ್ಷಣ ಪ್ರಭಾವಕ್ಕೆ ಒಳಗಾಗಿದ್ದರೂ, ತದನಂತರದಲ್ಲಿ ಹುಬ್ಬಳ್ಳಿಯ ಕಲಾಶಿಕ್ಷಣ ಪಡೆಯುವ ವೇಳೆಯಲ್ಲಿ ಪಾಶ್ಚಿಮಾತ್ಯ ಮಾಧ್ಯಮ ಶೈಲಿ ರೂಪ ತಂತ್ರ ಇತ್ಯಾದಿಗಳನ್ನು ನಮ್ಮ ನೆಲದ ಸೊಗಡಿಗೆ ಹೊಂದಿಸುವ ಪ್ರಯತ್ನವನ್ನು ಕೆ. ಜ್ಞಾನೇಶ್ವರ ಅವರು ಮಾಡಿದ್ದಾರೆ. ಅಂತೆಯೇ ಅಲ್ಲಿ ನಮ್ಮ ಭಾವನೆಗಳಿಗೆ ವಸ್ತು ವಿಷಯಗಳಿಗನುಸಾರವಾಗಿ ನೈಜ ಶೈಲಿಗೆ ಬದ್ಧರಾಗಿರುವುದು ಕಂಡುಬರುತ್ತದೆ. ಅದರಲ್ಲಿಯೇ ಅವರ ಸೃಜನಶೀಲತೆಯನ್ನು ಕಾಣಬಹುದಾಗಿದೆ.[೨೩]

ಕೆ. ಜ್ಞಾನೇಶ್ವರ ಅವರು ನೈಜ ಕಲಾಕೃತಿಗಳನ್ನು ರಚಿಸಲು ಕಾರಣ ಆಗಿನ ಸಮಕಾಲೀನ ಜನರು ಬಹುವಾಗಿ ಒಪ್ಪಿಕೊಳ್ಳುವ ಸಂದರ್ಭವಾಗಿತ್ತು ಮತ್ತು ಇವರಿಗೂ ಸಹ ಅದರಲ್ಲಿ ತೃಪ್ತಿ ದೊರೆಯುತ್ತಿತ್ತು. ಅದಕ್ಕೆ ಕಲಾಕೃತಿಗಳು ರಚಿಸುವ ಆಸಕ್ತಿ ಮತ್ತು ಕುತೂಹಲಗಳನ್ನು ಒಳಗೊಂಡಿದೆ ಎಂಬ ಮಾತುಗಳು ಕಲಾಸೃಷ್ಟಿಯ ಪರಿಣಾಮಗಳ ಸಾಮೂಹಿಕ ಸ್ವರೂಪವನ್ನು ವ್ಯಕ್ತಪಡಿಸುತ್ತವೆ. ಇಂತಹ ನೈಜ ಶೈಲಿಯ ಪರಂಪರೆಯಲ್ಲಿ ಆಕೃತಿಗಳನ್ನು ರಚಿಸುವಲ್ಲಿ ಮಾನವನ ಅಂಗಾಂಗಗಳನ್ನು ಇರುವುದಕ್ಕಿಂತ ಹೆಚ್ಚು ನೀಳವಾಗಿ ಮತ್ತು ಸಂದರವಾಗಿ ತೋರಿಸುವ ಒಂದು ಲಕ್ಷಣಗಳು ವೈಯಕ್ತಿಕತೆಯನ್ನು ಬಿಂಬಿಸುತ್ತದೆ.

ಕಲೆಗೆ ಒಂದು ಚಾಲನೆ (Movement) ಇದೆ. ಕೆ. ಜ್ಞಾನೇಶ್ವರ ಅವರ ಕಾಲದಲ್ಲಿ ಅವರು ಮಾಡಿರುವಂತಹ ಶಿಲ್ಪ ಹಾಗೂ ಚಿತ್ರಗಳಿಗೆ ತುಂಬಾ ಮೆಚ್ಚುಗೆ ಇತ್ತು. ಅಷ್ಟೇ ಬೆಲೆಯೂ ಇತ್ತು. ಆಗ ನೈಜ ರೀತಿಯಲ್ಲೇ ಚಿತ್ರಗಳನ್ನು ರಚಿಸಬೇಕಾಗುತ್ತಿತ್ತು. ಅದು ಅಲಂಕಾರಿಕವಾಗಿರಲಿ, ಮಾನವ ಆಕೃತಿಗಳನ್ನೇ ಹೊಂದಿರಲಿ, ಈಗಿನ ಸಮಕಾಲೀನದಲ್ಲಿಯ ವಿಚಾರದಲ್ಲಿ ಸಾಕಷ್ಟು ಬೆಳವಣಿಗೆಯಾಗಿದೆ.

೨೧. ಕೆ.ವಿ. ಸುಬ್ರಮಣ್ಯಂ. ಕಲಾ ಸಂವೇದನೆಯ ಒಳನೋಟಗಳು ಪುಟ : ೮೩
೨೨. ಕೆ.ವಿ. ಸುಬ್ರಮಣ್ಯಂ. ಕಲಾ ಸಂವೇದನೆಯ ಒಳನೋಟಗಳು ಪುಟ : ೮೩
೨೩. ಡಾ. ಲಕ್ಷ್ಮೀದೇವಿ ಗವಾಯಿ, ಕಲಾವಿದ ಎಂ.ಎ. ಚೆನ್ನರಾಯರ ಜೀವನ ಕಲಾಕೃತಿಗಳು ಪುಟ : ೩೫೪;೩೫೫

ಆದರೆ ಕೆ. ಜ್ಞಾನೇಶ್ವರ ಅವರ ಕಾಲದಲ್ಲಿ ಅವರು ನೋಡಿದಂತಹ ದೃಷ್ಟಿಕೋನ ಆಗಿನ ವಿಕಾಸಗೊಳ್ಳುತ್ತಿರುವಂತಹ ಕಲೆಯು ಆಕೃತಿ (Art form)ಗಳನ್ನು ಬಿಡದೆ ತಮಗೆ ಇಷ್ಟವಾದಂತಹ ವಿಷಯಗಳ ಮೇಲೆ ಕಲಾಕೃತಿ ರಚಿಸಿದ್ದಾರೆ. ಇದು ಕಲಾಕೃತಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಇದು ಅವರದೇ ಆದಂತ ಶೈಲಿ ಎಂದು ಹೇಳಬಹುದು.[೨೪]

ಕೆ. ಜ್ಞಾನೇಶ್ವರ ಅವರ ರೇಖೆಯ ವರ್ಣಗಳ ಲೇಪನಕ್ಕೆ ಮತ್ತು ಶಿಲ್ಪಗಳ ಮೇಲೆ ಸೂಕ್ಷ್ಮ ಕೆತ್ತನೆ, ವಿವಿಧ ಬಗೆಯ ವಿನ್ಯಾಸಗಳಿಗೆ ಹಾಗೂ ವಿಶೇಷವೆನಿಸುವ ಹೊಸ ರೀತಿಯ ರೇಖಾಶೈಲಿಗೆ ಹೆಚ್ಚು ಪ್ರಾಧಾನ್ಯತೆ ಇದೆ. ಇದರ ಜೊತೆಗೆ ಸಂಯೋಜನೆಯಲ್ಲಿ ವೈವಿಧ್ಯತೆ ಇರುವ ಅಂಶಗಳನ್ನು ಕಾಣುತ್ತೇವೆ. ಆಗಿನ ಸಮಕಾಲೀನ ಚಿತ್ರಗಳಲ್ಲಿ ಇರುವ ಕೃತಿಗಳು ಅಷ್ಟೇ ಶಕ್ತಿಯುತವಾದ ಕಲಾಕೃತಿಗಳೆಂದು ಹೇಳಬಹುದು. ವಿಷಯಗಳ ಭಿನ್ನತೆಯ ಜೊತೆಗೆ ಇಡೀ ಬದುಕಿನ ಸಂಸ್ಕೃತಿಯ ಅನೇಕ ಬೆಳವಣಿಗೆಯ ಹಂತಗಳನ್ನು ಕೆ. ಜ್ಞಾನೇಶ್ವರ ಅವರ ಕಲಾಕೃತಿಗಳಲ್ಲಿ ಕಾಣುತ್ತೇವೆ. ಇಂತಹ ಬದುಕನ್ನು ಪ್ರತಿಬಿಂಬಿಸುವಂತಹುದು ಕಲೆ ಆಗಿದೆ. ಆದ್ದರಿಂದ ಆಗಿನ ಕಲಾಕೃತಿಗಳು ಆ ಕಾಲವನ್ನು ಗುರುತಿಸುತ್ತ ಹೋದವು. ಇದರಿಂದಾಗಿ ಆ ಚಿತ್ರಗಳಲ್ಲಿ ಅದು ಹೊಸತಾಗಿಯೆ ಉಳಿಯಿತು. ಇಡೀ ನಮ್ಮ ಬದುಕಿನ ಹೊಸತನ, ಉಡುಗೆ ತೊಡುಗೆಯ ಹೊಸತನ ಹೀಗೆ ಅನೇಕ ವಿಷಯಗಳನ್ನು ನಾವು ಕೆ. ಜ್ಞಾನೇಶ್ವರ ಅವರ ಕಲಾಕೃತಿಗಳಲ್ಲಿ ಕಾಣುತ್ತೇವೆ. ಇವರ ಚಿತ್ರಗಳು ಮತ್ತು ಶಿಲ್ಪಕಲಾಕೃತಿಗಳನ್ನು ಭಾವಪೂರ್ವಕವಾಗಿ ಚಿತ್ರಿಸುವುದು ಮತ್ತು ಸನ್ನಿವೇಶಗಳ ಪರಿಣಾಮವನ್ನು ಒಂದೇ ಅವಕಾಶದ ಮೇಲೆ ಸಂಯೋಜನೆ ಮಾಡುವ ರೀತಿ, ಭಾವನೆಗಳನ್ನು ವ್ಯಕ್ತಪಡಿಸುವ ಭಾವನಾತ್ಮಕತೆ ವೇಷಭೂಷಣಗಳು, ಶಿಲ್ಪಗಳಲ್ಲಿ, ಹೂ, ಬಳ್ಳಿಯ ವಿವಿಧ ರೀತಿಯ ವಿನ್ಯಾಸ, ವಿಶಿಷ್ಟ ರೀತಿಯಲ್ಲಿ ನಿಂತ ದೇವತೆಗಳ ಶಿಲ್ಪಗಳು ಹಾಗೂ ಭಾವಚಿತ್ರಗಳ ಹಿನ್ನೆಲೆಯಲ್ಲಿ ಸೂಕ್ಷ್ಮವಾಗಿ ಅಭ್ಯಾಸ ಮಾಡಿರುವುದು ಮತ್ತು ವ್ಯಕ್ತಿಚಿತ್ರಣದಲ್ಲಿ ಆ ವ್ಯಕಿಯ ಸಂಪೂರ್ಣವಾದ ಹಾವ ಭಾವಗಳನ್ನು ಕಲಾಕೃತಿಗಳಲ್ಲಿ ಸೆರೆಯಿಡಿಯುತ್ತಾರೆ ಎಂಬುದನ್ನು ನಾವು ಅವರ ಕಲಾಕೃತಿಗಳಲ್ಲಿ ಕಾಣಬಹುದು.

ಒಂದೇ ಅವಕಾಶದಲ್ಲಿ ಅನೇಕ ಜನರ ಆಕೃತಿಗಳನ್ನು ಸ್ಪಷ್ಟವಾಗಿ ಗುರುತಿಸುವ ರೀತಿಯಲ್ಲಿ ಚಿತ್ರಿಸುವುದಲ್ಲದೇ ಪ್ರತಿಯೊಂದು ಆಕೃತಿಯನ್ನು ಸ್ಪಷ್ಟವಾಗಿ ಗುರುತಿಸುವ ರೀತಿಯಲ್ಲಿ ಚಿತ್ರಿಸುವ ಇವರ ಇನ್ನೊಂದು ವೈಶಿಷ್ಟ್ಯವಾಗಿದೆ. ಇಂತಹ ಒಂದು ಸಂಯೋಜನಾ ತಂತ್ರ ಶೈಲಿ ಅವರ ಗುರುಗಳಿಂದಲೇ ಬಂದಂತಹವುಗಳು. ಒಂದೊಂದು ಆಕೃತಿಯ ಮೇಲೂ ಉಚಿತ ವರ್ಣವನ್ನು ಲೇಪಿಸಿದ್ದಾರೆ. ಅಷ್ಟೊಂದು ಆಕೃತಿಗಳಿದ್ದರೂ ಹಿನ್ನೆಲೆ ಮುನ್ನೆಲೆ ಆಕೃತಿಗಳ ನಡುವೆ ಇರಬೇಕಾದ ಸ್ಥಳ ಅವಕಾಶದ ಕಲ್ಪನೆ ಅದ್ಭುತವಾದದ್ದು. ಹಾಗೂ ವೇಷಭೂಷಣಗಳು ಅಷ್ಟೇ ಆಯಾಕಾಲದ ಹಾಗೂ ವ್ಯಕ್ತಿತ್ವದ ತಕ್ಕಂತಹ ವೇಷಗಳನ್ನು ಚಿತ್ರಿಸಿದ್ದಾರೆ. ಹೆಚ್ಚಾಗಿ ಕೆಲವು ಶಿಲ್ಪಕಲಾ ಕೃತಿಗಳನ್ನು

೨೪. ಡಾ. ಲಕ್ಷ್ಮೀದೇವಿ ಗವಾಯಿ, ಕಲಾವಿದ ಎಂ.ಎ. ಚೆನ್ನರಾಯರ ಜೀವನ ಕಲಾಕೃತಿಗಳು ಪುಟ : ೩೩೩

ಬೇಲೂರು, ಹಳೇಬಿಡು ಮತ್ತು ಮಲೆನಾಡಿನಲ್ಲಿ ಕಂಡುಬರುವ ವಾಸ್ತುಶಿಲ್ಪ ದೇವಾಲಯಗಳ ಶಿಲ್ಪದ ಸೌಂದರ್ಯತೆಯನ್ನು ಮತ್ತು ಸೂಕ್ಷ್ಮ ಕೆತ್ತನೆ ನೋಡುವ ಭಂಗಿ ಶಿಲ್ಪಗಳಲ್ಲಿಯ ಪ್ರಮಾಣಬದ್ಧತೆ ಅಳತೆ ಎಲ್ಲವು ವಿಶೇಷ ಹಾಗೂ ಮೈತುಂಬಾ ಬಂಗಾರದ ಆಭರಣಗಳು ಹೀಗೆ ಹಲವು ಬಗೆಯ ವಿನ್ಯಾಸಗಳನ್ನು ಕೆ. ಜ್ಞಾನೇಶ್ವರ ಅವರ ಕಲಾಕೃತಿಗಳಲ್ಲಿ ಗಮನಿಸಬಹುದು. ಆಗಿನ ಕಾಲದಲ್ಲಿ ಉಪಯೋಗಿಸತಕ್ಕಂತಹ ದೈನಂದಿನ ವಸ್ತುಗಳು ಜನಜೀವನದ ಮುಖವನ್ನು ಮತ್ತು ಆಗಿನ ರಾಜಕೀಯವನ್ನು ತಮ್ಮ ಕಲಾಕೃತಿಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಅತ್ಯಂತ ಮೃದುವಾದ ಕೆತ್ತನೆ ಚಿತ್ರಗಳಲ್ಲಿ ಸೂಕ್ಷ್ಮವಾದ ವರ್ಣಲೇಪನ ಬಳಸುವುದರೊಂದಿಗೆ ಗಾಢವಾದ ನೆರಳು-ಬೆಳಕನ್ನು ಅತ್ಯಂತ ಪ್ರಭಾವಶಾಲಿಯಾಗಿ ಯೋಜಿಸಿದ್ದಾರೆ. ಚಿತ್ರಗಳಲ್ಲಿ ಸೂಕ್ಷ್ಮತೆಯ ಸ್ಪಷ್ಟತೆಯನ್ನು ತೋರಿಸಿದ್ದಾರೆ. ಕಲೆಯು ಯಾವಾಗಲೂ ಜನಗಳ ಮನಸ್ಸಿನ ಮೇಲೆ ಪ್ರಭಾವ ಬೀರುವ ಒಂದು ಚಿತ್ರಗಾರಿಕೆಯ ಮುಖ್ಯ ಸಾಧನೆಯಾಗಿದೆ. ಅದಕ್ಕಾಗಿ ಚಿತ್ರಕಲೆ ಮನೋವಿಜ್ಞಾನದ ಸಿದ್ಧಾಂತಗಳ ಮೇಲೆ ಆಧಾರವಾಗಿರುವುದು. ಕಲೆಯಲ್ಲಿ ಕೇವಲ ತಾಂತ್ರಿಕ ನೈಪುಣ್ಯತೆ ಬಂದಿದ್ದರೆ ಸಾಲದು, ತಾಂತ್ರಿಕ ನೈಪುಣ್ಯತೆಯೊಂದಿಗೆ ಮನೋವಿಜ್ಞಾನದ ತತ್ವಗಳನ್ನು ಅಳವಡಿಸಿಕೊಂಡರೆ ಚಿತ್ರಕಲಾಕೃತಿಯ ನೈಪುಣ್ಯತೆ ಇನ್ನೂ ಹೆಚ್ಚುತ್ತದೆ. ಯಾವುದೇ ಒಂದು ಕಲಾಕೃತಿಯ ಹಿಂದೆ ಕಲಾವಿದನ ಮನಸ್ಥಿತಿಯು ಮುಖ್ಯವಾಗಿ ಕಾರಣವಾಗಿರುತ್ತದೆ. ಹೀಗಾಗಿ ಚಿತ್ರಕಲೆ ಮನಃಶಾಸ್ತ್ರಕ್ಕೆ ಬಿಡಲಾರದ ನಂಟಾಗಿದ್ದು, ಇವು ಒಂದಕ್ಕೊಂದು ಪೂರಕ ಮತ್ತು ಪ್ರೇರಕವಾದ ಸಂದರ್ಭವನ್ನು ಹೊಂದಿವೆಯೆಂದು ಹೇಳಬಹುದು.[೨೫] ಕೆ. ಜ್ಞಾನೇಶ್ವರ ಅವರು ಕಲಾಕೃತಿಗಳನ್ನು ರಚಿಸುವಾಗ ಅವರು ಬಳಸಿದ ತಂತ್ರ ವಿಧಾನವನ್ನು ನಾವು ಗಮನಿಸಿದಾಗ ಅಧ್ಯಯನ ಕಾಲದ ಹಂತದಲ್ಲಿಯ ಕಲಾಕೃತಿಗಳಲ್ಲಿ ಬಳಸಿದ ತಂತ್ರಗಾರಿಕೆ, ವರ್ಣಪ್ರಭಾವ ಮತ್ತು ಕಲಾವಿದರಾಗಿ ಮೂಡಿರುವ ಕಲಾಕೃತಿಗಳ ತಂತ್ರ ವಿಧಾನವಲ್ಲದೆ, ನಂತರದ ದಿನಗಳ ಕಲಾಕೃತಿಗಳನ್ನು ರಚಿಸಿದ ತಂತ್ರ ವಿಧಾನವನ್ನು ಗಮನಿಸಿದಾಗ ಇಲ್ಲಿಯ ಆಯಾ ಒಂದು ಅವಧಿಗೆ ಸಂಬಂಧಪಟ್ಟಂತೆ ತಂತ್ರ ವಿಧಾನವನ್ನು ಬಳಸಿಕೊಂಡು ಕೆ. ಜ್ಞಾನೇಶ್ವರ ಅವರು ಕಲಾಕೃತಿಗಳನ್ನು ರಚಿಸಿದ್ದು ಕಂಡುಬರುತ್ತದೆ.[೨೬]

ಕೆ. ಜ್ಞಾನೇಶ್ವರ ಅವರು ಕಲಾಕೃತಿಗಳನ್ನು ನೋಡಿದೊಡನೆಯೇ ಅದರಲ್ಲಿ ಏನೋ ಒಂದು ರೀತಿಯ ಮನಸ್ಸನ್ನು ಸೆಳೆಯುವ ಆಕರ್ಷಣೆಯು ತನ್ನನ್ನು ತಾನೇ ಕರೆದೊಯ್ಯುತ್ತದೆ. ಇವರೇ ಹೇಳುವ ಹಾಗೇ ವ್ಯಕ್ತಿಚಿತ್ರಗಳನ್ನು ರಚಿಸುವುದು ಸುಲಭವಲ್ಲ. ಯಾಕೆಂದರೆ ಚಿತ್ರದಲ್ಲಿ ನಾವು ವ್ಯಕ್ತಿಯನ್ನು ತೋರಿಸಬಹುದು. ಆದರೆ ವ್ಯಕ್ತಿಯ ಹಾವ-ಭಾವಗಳನ್ನು ತೋರಿಸಬೇಕು (Exprerssion is very Imprortant in a portrait or life painting). ಒಂದು ವೇಳೆ ಅಲ್ಲಿ ಭಾವನೆ ಇರಲಿಲ್ಲವೆಂದರೆ

೨೫. ಕೆ.ವಿ. ಸುಬ್ರಮಣ್ಯಂ. ಕಲಾ ಸಂವೇದನೆಯ ಒಳನೋಟಗಳು, ಪುಟ : ೩೬

೨೬. ಕೆ. ಜ್ಞಾನೇಶ್ವರವರ ಮಗ ಪ್ರೇರಣೆರವರ ಸಂದರ್ಶನ

ಅದು ಕಲಾಕೃತಿಯೆನಿಸಲಿಕ್ಕೆ ಯೋಗ್ಯವಿಲ್ಲದಂತಾಗುತ್ತದೆ. ಅದಕ್ಕೆ ವ್ಯಕ್ತಿಚಿತ್ರಗಳಲ್ಲಿ ಭಾವನೆ ಪ್ರಧಾನವಾಗಿರುತ್ತದೆ ಎಂದು ಕೆ.ಜ್ಞಾನೇಶ್ವರ ಅವರು ವ್ಯಕ್ತಿಚಿತ್ರಗಳ ಬಗ್ಗೆ ಹೇಳುತ್ತಾರೆ.[೨೭] ಎಲ್ಲಾ ಕಲಾಕೃತಿಗಳಲ್ಲಿ ಹಾವ-ಭಾವ ಇಲ್ಲವಾದರೆ ಅದು ಕಲಾಕೃತಿ ಏನಿಸಿಕೊಳ್ಳುವುದಿಲ್ಲ ಆ ಅರ್ಹತೆಯು ಇಲ್ಲ ಎಂದು ಹೇಳಬಹುದು. ಅದೇ ರೀತಿಯಾಗಿ ಶಿಲ್ಪ ಕಲಾಕೃತಿಗಳಲ್ಲಿ ಪ್ರಮಾಣ ಹಾವ-ಭಾವ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ರೇಖಾಚಿತ್ರವು ತುಂಬಾ ಪ್ರಮಾಣಬದ್ಧ ಅಳತೆಯನ್ನು ಹೊಂದಿರಬೇಕು ಏಕೆಂದರೆ ಶಿಲ್ಪಕಲೆಯು ಸಂಪೂರ್ಣವಾಗಿ ಎಲ್ಲ ರೀತಿಯಾಗಿ ಒಂದು ಕಲಾಕೃತಿಯಾಗಲು ರೇಖಾಚಿತ್ರ ಮೊದಲು ಸರಿಯಾದ ಅಳತೆಯಲ್ಲಿ ಇರಬೇಕು. ನಂತರ ಮಾಡುವ ಶಿಲ್ಪ ಕೆತ್ತನೆ ಸೂಕ್ಷ್ಮ ರೀತಿಯಾಗಿ ಮತ್ತು ಕಲಾವಿದನ ಗಮನವು ಶಿಲ್ಪಕಲಾಕೃತಿಯು ಮುಗಿಯುವ ತನಕ ಆ ಶಿಲ್ಪದ ಮೇಲೆಯೇ ಇರಬೇಕು. ಆದರೆ ಆ ಶಿಲ್ಪವು ಒಂದು ಸುಂದರವಾದ ಕಲಾಕೃತಿಯಾಗಲು ಸಾಧ್ಯ ಮತ್ತು ಮುಖ್ಯವಾಗಿ ಹೇಳಬೇಕೆಂದರೆ ಶಿಲ್ಪಗಳನ್ನು ಮಾಡುವ ವಿಧಾನಗಳು ಬೇರೆ-ಬೇರೆಯಾದರೂ ಕಲಾಕೃತಿಗಳು ಮಾತ್ರ ಕಲಾವಿದನ ಅನುಭವವನ್ನು ಕಲಾಕೃತಿಗಳಲ್ಲಿ ತೋರಿಸುತ್ತದೆ ಎನ್ನಬಹುದು. ಶಿಲ್ಪ ಕಲಾಕೃತಿ ರಚಿಸುವಾಗ ವಿವಿಧ ಭಂಗಿಯ ಶಿಲ್ಪಗಳನ್ನು ಮಾಡಲಾಗುವುವು ಮತ್ತು ಹಲವು ಬಗೆಯ ವಿಭಿನ್ನ ವಿನ್ಯಾಸಗಳನ್ನು ಬಳಸುವುದು ಹೀಗೆ ಈ ಎಲ್ಲಾ ಹಂತಗಳನ್ನು ದಾಟಿದಾಗಲೇ ಒಂದು ಶಿಲ್ಪಕಲಾ ಕೃತಿಯು ಹೊರಹೊಮ್ಮುತ್ತದೆ ಎಂದು ಹೇಳುತ್ತಾರೆ ಜ್ಞಾನೇಶ್ವರ ಅವರು.[೨೮]

ಇದೇ ರೀತಿಯ ತಂತ್ರಗಾರಿಕೆಯನ್ನು ಬಳಸಿಕೊಂಡು ಇವರು ಕೆಲವು ಸ್ಥಿರಚಿತ್ರಗಳು ಮತ್ತು ವ್ಯಕ್ತಿಚಿತ್ರಗಳನ್ನು ಚಿತ್ರಿಸಿದ್ದಾರೆ. ಈ ತಂತ್ರ ವಿಧಾನಕ್ಕೆ ಬಳಸುವ ವರ್ಣಗಳು ಹೀಗಿವೆ Busht wounder vyndoke Brown, cobolt blue, sapgreen, Emorold green, yellow ochre, crim son like, Flake white ಮುಂತಾದ ವರ್ಣಗಳನ್ನು ಬಳಸಿಕೊಂಡು ಕಲಾಕೃತಿಗಳನ್ನು ರಚಿಸಿದ್ದಾರೆ. ಕೇವಲ ರೇಖಾಚಿತ್ರದ ಬರಿ ಚಿತ್ರ ರಚನೆ ಪದ್ದತಿ ಮತ್ತು ವರ್ಣ ಸಾಮರಸ್ಯದ ವಿಂಗಡನೆಗಳಿಂದಲೇ ಕಲಾಕೃತಿಗಳ ರೂಪುರೇಷೆಗಳನ್ನು ಗುರುತಿಸಲು ಅಸಾಧ್ಯವಾಗುವುದು. ಯಾವುದೇ ಕಲಾಕೃತಿಯಲ್ಲಿಯ ಆಕಾರ ವರ್ಣಗಳ ತಾಳ-ಮೇಳ ವಿಷಯಗಳ ಸ್ವಂತಿಕೆ ತಾಂತ್ರಿಕಲೆ ಕಲೆಯ ಒಳರ್ಥಗಳನ್ನು ನಾವು ಸೂಕ್ಷ್ಮವಾಗಿ ಗುರುತಿಸಬೇಕು. ಕೇವಲ ಆಕಾರ ಪ್ರಮಾಣಬದ್ಧವಾಗಿದ್ದರೆ ಮಾತ್ರ ಸಾಲದು ಬಣ್ಣಗಳ ಬಳಕೆಯ ತಾಳ-ಮೇಳದಲ್ಲಿ ಸಮತೋಲನವು ಅಷ್ಟೆ ಪ್ರಧಾನ ಪಾತ್ರವಹಿಸುತ್ತದೆ. ಇಲ್ಲಿ ದೊಡ್ಡಗಾತ್ರದ ಚಪ್ಪಟೆಯಾದ ಕುಂಚದಿಂದ ಬಣ್ಣವನ್ನು ತೆಳುವಾಗಿ ಒರೆಸುತ್ತಾ ಹೋಗಿದ್ದಾರೆ. ಮತ್ತು ಅವು ನೋಡಿದರೆ ಅಡ್ಡವಾದ ಮತ್ತು ಉದ್ದವಾದ ಪಟ್ಟಿಗಳ ಆಕಾರಗಳಂತೆ ಕಂಡರೂ ಅವು ನೋಡುವುದಕ್ಕೆ ಕಣ್ಣಿಗೆ ಒಂದು ರೀತಿಯ ಮುದವನ್ನು ಕೊಡುತ್ತದೆ. ಇಲ್ಲಿ ಬೆಳೆಸಿದ ತಂತ್ರಗಾರಿಕೆ ವಿಭಿನ್ನವಾಗಿದೆ ಎನ್ನಬಹುದು ಕೆ.

೨೭. ಕೆ. ಜ್ಞಾನೇಶ್ವರವರ ಮಗ ಪ್ರೇರಣೆರವರ ಸಂದರ್ಶನ
೨೮. ಕಲಾಪಿದರೊಂದಿಗೆ ಸಂದರ್ಶನ

ಜ್ಞಾನೇಶ್ವರ ಅವರು ಪ್ರತಿಯೊಂದು ಮಾಧ್ಯಮದಲ್ಲೂ ತಮ್ಮದೇ ಆದ ತಂತ್ರ ವಿಧಾನದೊಂದಿಗೆ ಅವರು ಕಲಾಕೃತಿಗಳನ್ನು ರಚಿಸುತ್ತಾ ಬಂದಿರುವುದನ್ನು ಗಮನಿಸಬಹುದಾಗಿದೆ.

**ಕೆ. ಜ್ಞಾನೇಶ್ವರ ಅವರು ಕಲಾಕೃತಿಗಳ ಅಧ್ಯಯನದಿಂದ ಕಂಡುಬರುವ ಪ್ರಮುಖ ಅಂಶಗಳು**

ಸಾಂಪ್ರದಾಯಿಕ ಕಲೆ, ಅಮೂರ್ತ ರೂಪದ ಕಲೆ ಎಂಬ ವರ್ಗೀಕರಣ ಇಂದಿನ ಸಮಕಾಲೀನ ಕಲಾ ಸಂದಂರ್ಭದಲ್ಲಿ ಕೇಳಿ ಬರುತ್ತಿದೆಯಾದರೂ ಕಲಾವಿದರ ವೈಯಕ್ತಿಕ ಮನೋಧರ್ಮದ ಮೇಲೆ ಅವರವರ ಆಯ್ಕೆಯಾಗುತ್ತದೆ. ಕೆ.ಜ್ಞಾನೇಶ್ವರ ಅವರ ನೈಜ ಕಲೆಯಲ್ಲಿ ವಿಶೇಷವಾಗಿ ತಮ್ಮನ್ನು ತೊಡಗಿಸಿಕೊಂಡು ಕಲಾಕೃತಿ ರಚನೆ ಮಾಡಿದ್ದಾರೆ. ಯಾವುದೇ ಪರಂಪರೆ ಇಲ್ಲದೆ ಯಾವ ಕಲೆಗಳು ಬೆಳೆಯುವುದಿಲ್ಲ. ಪರಂಪರೆ ಎನ್ನುವುದನ್ನು ಕಟ್ಟಡಕ್ಕಿರುವ ಭದ್ರ ತಳಹದಿ ಇದ್ದಂತೆ ಇಂದು ನಿನ್ನೆಯದರ ಮುಂದುವರಿಕೆ ಎಂಬುದು ಗಮನಾರ್ಹ ಅಂಶವಾಗಿದೆ.

ಕೆ. ಜ್ಞಾನೇಶ್ವರ ಅವರು ಮಲೆನಾಡಿನ ಮಹಾನ್ ಕಲಾವಿದ. ಅಭಿಜಾತ ಕಲಾವಿದ ಎಂದು ಅನೇಕ ಕಲಾಭಿಮಾನಿಗಳು ಕರೆಯುತ್ತಾರೆ. ಅದಕ್ಕೆ ಮುಖ್ಯ ಕಾರಣ ಅವರ ಮುತ್ತಾತ ತಿಪ್ಪಾಜಿಯವರು ಮತ್ತು ತಾತ ಪರಶುರಾಮಪ್ಪ ಹಾಗೂ ತಂದೆ ಕೃಷ್ಣರಾವ್‌ರವರು ಕಲಾ ಶಿಕ್ಷಣ ನೀಡಿದ ಗುರುಗಳಾದ ಹಳೆಜೋಳ ರವರು ಹಾಗೇ ಎಸ್.ಎಮ್.ಪಂಡಿತ್, ಎಮ್.ವಿ. ಮಿಣಜಗಿ, ಎಂ.ಡಿ.ವಿ. ಆಚಾರ್ಯ ಇನ್ನೂ ಅನೇಕರ ಕಲಾಕೃತಿಯ ಕೆ. ಜ್ಞಾನೇಶ್ವರ ಅವರಿಗೆ ಪ್ರೋತ್ಸಾಹ ನೀಡಿದವು ಮತ್ತು ಇವರುಗಳ ಚಿತ್ರಗಳು ಸ್ಪೂರ್ತಿ ಆಗಿದ್ದವು ಎನ್ನಬಹುದು. ಭಾರತೀಯ ಕಲೆಗೆ ಧರ್ಮವೇ ಸ್ಫೂರ್ತಿಯಾಗಿದ್ದರಿಂದ ಭಾರತೀಯರಿಗೆ ಕಲೆ–ಕಲೆಗಾಗಿ ಎಂದರೆ ಅಷ್ಟು ಸಮರ್ಪಕವಲ್ಲ, ತತ್ವವನ್ನು ಸಚ್ಚಿದಾನಂದ ಸ್ವರೂಪವೆಂದೆ. ಪರಬ್ರಹ್ಮ ತತ್ವದಲ್ಲಿ ಸತ್ ಚಿತ್ ಆನಂದ, ತತ್ವಗಳು ಲೀನವಾಗಿರುವುವೆಂದೇ ತಿಳಿದ ಭಾರತೀಯ ತಾತ್ವಿಕತೆ ಕಲೆ ಅಥವಾ ಸೌಂದರ್ಯಾನುಭವ ಒಂದು ಸಾಧನ ಮಾತ್ರ ಏಕೈಕ ಧ್ಯೇಯವಲ್ಲ. ಜೀವನದ ಅಂತಿಮ ಧ್ಯೇಯವಾದ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸೌಂದರ್ಯಾನ್ವೇಷಣೆ ಒಂದು ಸಾಧನೆ. ಸೌಂದರ್ಯಾನುಭವ ನೀಡುವ ಆನಂದ, ಬ್ರಹ್ಮಾನಂದ ಒಂದು ಸ್ವರೂಪ ಆಗಿದೆ. ಇಂತಹ ಬ್ರಹ್ಮಾನಂದನವನ್ನು ನೀಡುವ ಕಲೆ ಆತ್ಮದ ಶ್ರೇಯಸ್ಸನ್ನು ಸಾಧಿಸುವುದು ಕ್ಷಣಕಾಲವಾದರೂ ರಾಜಸಿಕ ತಾಮಸಿಕ ಗುಣಗಳನ್ನು ಭಂಗಮಾಡಿ ಒಂದು ವಿಶೇಷವಾದ ಕಲೆ ಆನಂದಾನುಭವವನ್ನು ಸಹೃದಯದಲ್ಲಿ ಉಂಟುಮಾಡುವುದರಿಂದ ಕಲೆ ಪ್ರೇಕ್ಷಕನ ಮೇಲೆ ಅಥವಾ ಸಹೃದಯದ ಮೇಲೆ ಮಾಡುವ ಸತ್ವ: ಪ್ಪರಿಣಾಮ ಫಲವೇ ಕಲೆಯಿಂದ ಇಂತಹ ಶ್ರೇಯಸ್ಸನ್ನು ಕೆ. ಜ್ಞಾನೇಶ್ವರ ಅವರು ಕಲಾನಿಷ್ಠ ಹಾಗೂ ಪರಿಶ್ರಮಗಳಿಂದ ಕೂಡಿದ ಚಿತ್ರಮಯ ಬದುಕಿನಲ್ಲಿ ಕಾಣುತ್ತೇವೆ.

ಭಾರತೀಯ ಚಿತ್ರಕಲೆಯ ಸಂವೇದನೆ ಮೂಲತಃ ರೊಮ್ಯಾಂಟಿಕ್ ಆಗಿದ್ದು, ಅಂತೆಯೇ ಕೆ.ಜ್ಞಾನೇಶ್ವರ ಅವರ ಪ್ರಭಾವ ವಿಸ್ತಾರವಾದದ್ದು. ಅಂದಿನ ಜನರ ಸ್ವಾತಂತ್ರ್ಯ ಪ್ರೀತಿ, ಸ್ವದೇಶಿ ಚಳುವಳಿ, ಬ್ರಿಟಿಷರ ದಬ್ಬಾಳಿಕೆ, ಜನರ ಒಳಗಾಗಿದ್ದು ಇತ್ಯಾದಿಗಳು ನಮ್ಮ ಕಲಾವಿದರ ಕೃತಿಗಳಲ್ಲಿ

ಕಾಣಿಸಿಕೊಳ್ಳಲಿಲ್ಲ ಎನ್ನುವುದು ಅವರ ಪುರಾಣ ಕೃತಿಗಳಲ್ಲಿ ಪ್ರಭಾವಿಸುತ್ತವೆ. ಅಂದಿನ ಸಮಾಜದ ನಿರೀಕ್ಷೆಗಳು ಕಲೆಯ ಕುರಿತಂತೆಯೇ ಆಗಿದ್ದವು. ಕೆ. ಜ್ಞಾನೇಶ್ವರ ಅವರು ಸಮಕಾಲೀನ ಕಲಾವಿದರಲ್ಲಿ ರಚಿಸುವಂಥ ಭಾವಚಿತ್ರವಾಗಲಿ, ನಿಸರ್ಗ ಚಿತ್ರಗಳಾಗಲಿ ಧಾರ್ಮಿಕ ಸಂಯೋಜನೆಗಳ ಕೃತಿಗಳನ್ನು ನಿಜವಾದ ಗಂಭೀರ ಕಲೆ ಎಂದು ಭಾವಿಸಿದ್ದರು. ಯಾಕೆಂದರೆ ಆ ಕಾಲದಲ್ಲಿ ಕಲಾವಿದರು ಕಲೆ ಎಂದರೇನೆಂದು ಬೋಧಿಸುತ್ತಿದ್ದರೋ ಆ ಗುಣಲಕ್ಷಣಗಳಿಗೂ ಅವರು ಸೃಷ್ಟಿಸುತ್ತದೆ. ಕಲೆಗೂ ಒಂದು ಅವಿನಾಭಾವ ಸಂಬಂಧವಿರುತ್ತಿತ್ತು. ಅಂದಿನಿಂದ ತೀವ್ರವಾದ ಮೌಖಿಕ ಲಿಖಿತ ಹಾಗೂ ವಾಚ್ಯಾರಿತ್ವಿಕ ಜಿಜ್ಞಾಸೆಯು ಇಂದಿನವರೆಗೂ ನಮ್ಮಲ್ಲಿ ಕಾಣೆಯಾಗಿದೆ. ಅಲ್ಲದೆ ಆ ಕಾಲದಲ್ಲಿ ಕಲಾಕ್ಷೇತ್ರದಲ್ಲಿ ಬೀಸಿದ ಹೊಸಗಾಳಿಗೆ ಅನೇಕ ಕಲಾವಿದರು ಸ್ಪಂದಿಸದಂತಹ ಸಂದಿಗ್ಧ ಸ್ಥಿತಿಯಲ್ಲಿ ಇದ್ದರೂ ತಮಗೆ ಪರಿಣಿತಿ ಇದ್ದು ಹಿಂದಿನವರ ಜೀವನಾಧಾರಕ್ಕೆ ದಾರಿ ಇತ್ತು. ಆದರೆ ತಮ್ಮ ಊಹೆಗೂ ನಿಲುಕದ ಈ ಹೊಸದರಲ್ಲಿ ಅನಿಶ್ಚಯಸ್ಥಿತಿ ಕಲೆಯ ಉದ್ದೇಶ ಮತ್ತು ಆದರ್ಶಗಳಿದ್ದರು. ಕಲೆಗಾಗಿ ಕಲೆ ಎಂಬ ಸತ್ಯ ಅವರಿಗೆ ಹೊಸದು ಹೀಗಾಗಿ ಹೊಸ ಕಲೆಯ ಬಗ್ಗೆ ಅಷ್ಟೊಂದು ಆಸಕ್ತಿಯನ್ನು ಅವರು ಹೊಂದಿರಲಿಲ್ಲ. ಅದು ಕಲಾವಿದನೊಬ್ಬನ ವೈಯಕ್ತಿಕ ಸ್ವಾತಂತ್ರ್ಯದ ವಿಚಾರವು ಆಗಿದೆ.

ಕೆ. ಜ್ಞಾನೇಶ್ವರ ಅವರು ಒಬ್ಬ ಕಲಾವಿದರಾಗಿ ತಮ್ಮ ಸಮಕಾಲೀನ ಕಲೆಯನ್ನು ಬದುಕಿಸಿಕೊಂಡು, ಮುಂದುವರೆಸಿಕೊಂಡು ಬಂದಂಥವರಲ್ಲಿ ಪ್ರಮುಖರು. ಕಲೆಗಳಲ್ಲಿ ಸಮಕಾಲೀನತೆಯ ಪ್ರಸ್ತುತತೆ ಅಗತ್ಯವಾಗಿ ಇರಲೇಬೇಕಾದಂಥ ಒಂದು ಮೌಲ್ಯ. ಒಬ್ಬ ಕಲಾವಿದ ತನ್ನ ಕಾಲದ ವಿಶಿಷ್ಟ ಜೀವನದ್ಧನಿಗೆ ಸವಾಲುಗಳಿಗೆ ತನ್ನನ್ನು ಸಮ್ಮುಖವಾಗಿಸಿಕೊಂಡು ಅಭಿವ್ಯಕ್ತಿಸುವ ಮೂಲಕ ಆ ಕಾಲ ಕುರಿತು ಅವನ ಧೋರಣೆ ಅಥವಾ ನಿಲುವುಗಳನ್ನು ದಾಖಲಿಸುವ ಸಾಧ್ಯತೆಗಳಿವೆ. ಇಂಥ ಕೃತಿಯು ಸಮಕಾಲೀನ ದಾಖಲೆಯಾಗಿ ಹೆಚ್ಚು ಮಹತ್ವ ಪಡೆಯುತ್ತದೆ.[೩೯]

ಕೆ. ಜ್ಞಾನೇಶ್ವರ ಅವರು ಕಲಾಕೃತಿ ರಚನೆಯ ಧೋರಣೆ ನಿಲುವುಗಳನ್ನು ಅವರ ಚಿತ್ರಗಳ, ಶಿಲ್ಪಗಳ ಮುಖಾಂತರ ತಿಳಿದುಕೊಳ್ಳಬಹುದು. ಕಲಾವಿದರ ನೈಜಕಲಾ ಪರಂಪರೆಯು ಕಲಾವಿದರೆನ್ನುವ ಅಪವಾದವಿದೆ. ಆದರೆ ಪರಂಪರೆ ಇಲ್ಲದೆ ಯಾವುದನ್ನು ಅರಿತುಕೊಳ್ಳಲು ಸಾಧ್ಯವಿಲ್ಲ. ವಚನಕಾರರಾದ ಅಲ್ಲಮಪ್ರಭುಗಳು ಹೇಳುವಂತೆ ಹಿಂದಿನ ಹೆಜ್ಜೆಯನ್ನರತಲ್ಲದೆ ನಿಂಥ ಹೆಜ್ಜೆಯನರಿಯಬಾರದು.[೪೦] ಅಂದರೆ ವರ್ತಮಾನ ಚೆನ್ನಾಗಿ ಅರಿಯಬೇಕಾದರೆ ಪರಂಪರೆಯನ್ನು ಅರಿತಿರಬೇಕಾಗುತ್ತದೆ ಎನ್ನುವ ಮಾತು ಎಲ್ಲಾ ಕ್ಷೇತ್ರಗಳಿಗೂ ಅನ್ವಯಿಸುತ್ತದೆ. ಈ ನೈಜ ಕಲಾ ಸ್ವರೂಪಗಳ ಪ್ರಪಂಚದ ಇತಿಹಾಸವನ್ನು ಸಮರ್ಥವಾಗಿ ನಿರೂಪಿಸುವೆ. ಈ ಕಲಾಬಂಡಾರವಿಲ್ಲದೆ ಅಂದಿಗೂ ನಮ್ಮ (ಅಮೂರ್ತ ವಿರೂಪತೆಯ, ತಿರುಚಿದ ಅನ್ನುವ ಭಾವನೆಯಿಂದ ಕೂಡಿದ್ದು) ಶೈಲಿಯೇ ಇದ್ದಿದ್ದರೆ ನಾವು ಇತಿಹಾಸದ ಸತ್ಯ

೩೯. ಅ.ಲ. ನರಸಿಂಹನ್ ಕರ್ನಾಟಕ ಭಿತ್ತಿಚಿತ್ರ ಪರಂಪರೆ. ಪುಟ : ೩೬
೪೦. ಬಿ. ಕೆ. ರಾಮಕೃಷ್ಣರಾವ್, ಸೌಂದರ್ಯ ಮತ್ತು ಕಲೆ. ಪುಟ : ೧೧೭

ಚಿತ್ರವನ್ನು ಗುರುತಿಸಲು ಸಾಧ್ಯವಾಗುತ್ತಿತ್ತೆ [೩೧] ಎನ್ನುವ ಎಂ.ಟಿ.ವಿ. ಆಚಾರ್ಯರ ಮಾತು ಸತ್ಯವಾಗಿದೆ. ಯಾಕೆಂದರೆ ನೋಡುಗನು ಕಲಾಕೃತಿಯಲ್ಲಿ ತನ್ನ ಅನುಭವಕ್ಕೆ ಬಂದ ವಸ್ತುಗಳನ್ನು ಹುಡುಕುವುದು ಸಹಜ. ಅದಕ್ಕಾಗಿ ಕ್ರಿ.ಶ. ೭ನೇ ಶತಮಾನದವರೆಗೆ ರೂಪಿಸಲ್ಪಟ್ಟ ಅಜಂತಾದ ಚಿತ್ರಕಲಾ ವೈಭವವನ್ನು ಕಂಡು ಹೆಚ್.ಕಸಿನ್ಸಿರು ಈ ಬಗ್ಗೆ ಬರೆಯುತ್ತಾ ಸಂಸ್ಕೃತಿಯು ಹಲವು ಉನ್ನತಮಟ್ಟದವರ ಸ್ವತ್ತಲ್ಲ. ಅದು ಅಪಾರ ಜನತೆಯ ಸ್ವತ್ತಾಗಬೇಕು. ಮಾನವನ ವಿಕಾಸಕಾರಕ ದುರ್ಗುಣಗಳನ್ನು ನಿಯಂತ್ರಿಸಿ ಕ್ರಿಯಾತ್ಮಕತೆಯಿಂದ ಮಾನವನನ್ನು ಉನ್ನತಿಗೇರಿಸುವಂತಹ ಚೈತನ್ಯವೇ ಕಲೆ, ಸಂಸ್ಕೃತಿಗಳ ಹಿರಿಮೆ[೩೨] ಎಂದಿರುವುದು ಸರ್ವ ಕಾಲಕ್ಕೂ ಮನನೀಯವಾದುದೆಂದರೆ ತಪ್ಪಲ್ಲ. ನೋಡುಗನ ರಸಿಕತನ ಅಥವಾ ಸಹೃದಯವರೇ ಆಗಲಿ ಆತನಲ್ಲಿ ರಸಾಯನುಭೂತಿಯಾಗುತ್ತದೆ. ಆನಂದ ಉಂಟಾಗುತ್ತದೆ. ಹಾಗೇ ಕಲಾವಿದನನ್ನು ತಲುಪಲಾರದವರಿಗೆ ನಿರಾಶೆಯಾಗುತ್ತದೆ. ಈ ಮಾತು ಸಂಪ್ರದಾಯ ಹಾಗೂ ನವ್ಯ ಎರಡಕ್ಕೂ ಅನ್ವಯಿಸುತ್ತದೆ. ಸಂಪ್ರದಾಯದಲ್ಲಿ ಸಾದೃಶ್ಯದ ಅಂಶ ಹೆಚ್ಚಿರಬಹುದು.[೩೩] ಹೀಗಿರುವುದರಿಂದಲೇ ಈ ಕಲೆಯು ಜನರ ರಸಾನಂದಕ್ಕೆ ಹತ್ತಿರವಾಗುತ್ತಿದೆ. ಅಂತೆಯೇ ಕೆ. ಜ್ಞಾನೇಶ್ವರ ಅವರು ನೈಜ ಕಲಾ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದರು. ತಾನು ಬೆಳೆದ, ನಡೆದ, ಚಿಂತಿಸಿದ, ನೋವು, ನಲಿವುಗಳನ್ನು ಅನುಭವಿಸಿದ ಕಲಾವಿದ ತನ್ನ ಕೈಯಲ್ಲಿ ಆ ಕಾಲದ ಸಂದರ್ಭಗಳನ್ನು ಯಾವ ಸೃಷ್ಟಿ ಮಾಧ್ಯಮಗಳನ್ನು ಕೊಟ್ಟವೋ ಅವುಗಳನ್ನು ದುಡಿಸಿಕೊಂಡು, ಕಾಲ ಕಾಲಕ್ಕೆ ಹಲವು ಉದ್ದೇಶಗಳಿಗಾಗಿ ತನ್ನ ಅಭಿವ್ಯಕ್ತಿಯ ತೀವ್ರತೆಯನ್ನು ಬಳಸಿಕೊಳ್ಳುವನು ಎನ್ನುವಂತೆ ಕೆ. ಜ್ಞಾನೇಶ್ವರ ಅವರು ತಮ್ಮ ಕಾಲದಲ್ಲಿಯ ಸೃಷ್ಟಿ ಮಾಧ್ಯಮಗಳನ್ನೇ ದುಡಿಸಿಕೊಂಡು ಮುಂದೆ ಬಂದವರು. ಸಮಾಜದಲ್ಲಿ ಕಲೆ ಬೇಕು. ಒಂದು ಕಾಲದ, ಒಂದು ವ್ಯಕ್ತಿತ್ವದ ವಿಚಾರದ ಪ್ರವಾಹ ಅನ್ನುವಂತಹ ತಿಳುವಳಿಕೆಯನ್ನು ಪ್ರಮುಖವಾಗಿ ಉಳಿಸಿಕೊಟ್ಟವರು ಕೆ.ಜ್ಞಾನೇಶ್ವರ ಅವರು ಎಂದು ಹೇಳುವಲ್ಲಿ ಸತ್ಯವಿದೆ. ಕಲಾಕೃತಿಯು ಕಲಾವಿದನ ಸಮಗ್ರ ಪ್ರತಿಬಿಂಬ. ಒಂದು ಚಿತ್ರವೆಂದರೆ ಆತನ ಆತ್ಮದೃಷ್ಟಿಗೆ ಬೋಧನೆಯಾದ ಒಂದು ದೃಶ್ಯ. ಹೀಗೆ ಕಲಾಕೃತಿಯು ಕಲಾವಿದನ ಸಮಗ್ರ ಜನಾಂಗದ ಪ್ರತಿಬಿಂಬ. ಸಮಾಜದ ಅಂತಃಚಕ್ಷುವೇ ಕಲಾವಿದನೆಂದರೆ ತಪ್ಪಲ್ಲ.[೩೪] ಆದ್ದರಿಂದ ಆಗಿನ ಸಮಾಜ ಯಾವುದನ್ನು ಒಪ್ಪಿಕೊಳ್ಳುತ್ತಿತ್ತೋ ಅದನ್ನು ಕಲಾವಿದರು ಚಿತ್ರಿಸಿದರು ಮತ್ತು ಅದರ ಬಗ್ಗೆ ಅವರಿಗೆ ಸಮಾಧಾನ, ತೃಪ್ತಿಯು ಇತ್ತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಸಂವೇದನಾಶೀಲ ಕಲಾವಿದನೊಬ್ಬನ ಯಾವುದೇ ಅನುಭವಕ್ಕೆ ಅವನದೇ ಆದ ಭಾವನಾತ್ಮಕ ಪ್ರತಿಕ್ರಿಯೆ ಅಂತರಂಗದ ಸಾಮರ್ಥ್ಯ ಭಾವನಾತ್ಮಕ ಪ್ರಜ್ಞೆ ಹಾಗೆಯೇ ವೈಯಕ್ತಿಕ ಅಭಿರುಚಿಯ

೩೧. ಕೆ.ವಿ. ಸುಬ್ರಮಣ್ಯಂ, ಕಲಾ ಸಂವೇದನೆಯ ಒಳನೋಟಗಳು, ಪುಟ : ೩೬
೩೨. ಆರ್.ಸಿ. ಹಿರೇಮಠ, ಬಸವಣ್ಣನವರ ವಚನಗಳು, ಪುಟ : ೯೪
೩೩. ಎಂ.ಟಿ.ವಿ. ಆಚಾರ್ಯ, ಕಲೆ ಮತ್ತು ನಾನು, ಪುಟ : ೧೧೭
೩೪. ಬಿ.ಆರ್. ಶಿಷ್ಟೇಸ್ವಾಮಿ, ಕಲಾವಿದನ ನೆನಪುಗಳು, ಪುಟ : ೨೦

ಅಡಿಪಾಯದ ಮೇಲೆ ನಿಂತಿರುವಂಥದ್ದು ಅಂತೆಯೇ ಕಲಾವಿದರು [೩೫] ತಮ್ಮ ಕಲಾಕೃತಿಗಳ ವಸ್ತು ವಿಷಯಗಳಿಗೆ ಅನುಸಾರವಾಗಿ ನೈಜ ಶೈಲಿಯನ್ನು ಅಳವಡಿಸಿಕೊಂಡು ತಮ್ಮ ಸ್ವಂತಿಕೆಯ ಭಾವನಾ ವಿಶೇಷಗಳನ್ನು ನಿರೂಪಿಸಿದವರು. ಬಸವಣ್ಣನವರು ಹೇಳುವಂತೆ 'ಅನು ಒಲಿದಂತೆ ಹಾಡುವೆ'[೩೬] ಎನ್ನುವಂತೆ ಕೆ. ಜ್ಞಾನೇಶ್ವರ ಅವರು ತಮ್ಮದೇ ಆದ ಮಾರ್ಗವನ್ನು ಸೃಷ್ಟಿಸಿ ಚಿತ್ರಕಲಾ ಪ್ರಪಂಚದಲ್ಲಿ ನಡೆದು ಬಂದವರು.

ನೈಜ್ಯಶೈಲಿಯ ಬಗ್ಗೆ ಎಂ.ಟಿ.ವಿ. ಆಚಾರ್ಯ ಅವರು ಹೇಳುವಂತೆ 'ನಮ್ಮಲ್ಲಿ ನೈಜಶೈಲಿಯ ಕಲೆಯ ಹಿಂದೆಯೂ ಇತ್ತು. ಇಂದಿಗೂ, ಮುಂದೆಯೂ ಇರುವ ಹಕ್ಕು ಅದಕ್ಕಿದೆ. ಕೆಲವರ ಸ್ಥಾನದಿಂದ ಜನಮನದಿಂದ ಅದನ್ನು ಎಂದಿಗೂ ಅಳಿಸಲು ಸಾಧ್ಯವಿಲ್ಲ. ಯಾವುದೇ ಕಾಲದಲ್ಲಿ ಯಾವುದೇ ದೇಶದಲ್ಲಿ ಶೈಲಿ ಪ್ರಭಾವಗಳನ್ನು ಅನುಸರಿಸಿ ಕಲಾವಿದನ ಸ್ವತಿಂಕೆ ಭಾವನಾ ವಿಶೇಷಗಳನ್ನು ನಿರೂಪಿಸುವ ಕಲಾರೂಪ ಶೈಲಿಗಳಲ್ಲಿಯೂ ಎಂದಿಗೂ ಕಲೆಯಾಗಿಯೇ ಉಳಿದು ವಿಶ್ವದ ಸರ್ವಕಾಲಿಕ ಸಾಂಸ್ಕೃತಿಕ ನಿಧಿಯಾಗುತ್ತದೆ ಎಂಬುದು ಸತ್ಯ'[೩೭] ಎನ್ನುತ್ತಾರೆ. ಇಂದಿಗೂ ಪಾಶ್ಚಿಮಾತ್ಯ ಕಲಾ ಸಂಗ್ರಹಾಲಯಗಳು ರೆಂಬ್ರಾಂಟ್ ಮೈಕಲ್ ಎಂಜಲೋ ಮುಂತಾದವರ ಕಲಾಕೃತಿಗಳನ್ನು ಅಪೂರ್ವ ನಿಧಿಯಂತೆ ರಕ್ಷಿಸಿ ಅಸಂಖ್ಯಾತ ಜನಸಾಗರಕ್ಕೆ ಪ್ರದರ್ಶಿಸಿ ಮನತಣಿಸುವಂತೆ ಮಾಡಿದ್ದಾರೆ. ನಮ್ಮಲ್ಲಿಯೂ ಇಂತಹ ಸಂಪ್ರದಾಯ ಬೆಳೆಯದಿರುವುದು ದುರದೃಷ್ಟಕರವಾಗಿದೆ.

ಪ್ರಪಂಚದ ಅತ್ಯುನ್ನತ ಕಲಾವಿದರಲ್ಲೊಬ್ಬನಾದ ಪಿಕಾಸೋ ಇದ್ದನೇ ಹೇಳುತ್ತಾನೆ. ಆತನು ಲಂಡನ್ನಿನ ದಿ ಲಿವ್ವಿಂಗ ಮ್ಯೂಜಿಯಂ ಎಂಬ ಪತ್ರಿಕೆಯಲ್ಲಿ ಪ್ರಕಟವಾದ ಅವನ ಬಿಚ್ಚು ನುಡಿಗಳಿವು ಜನರು ದುಃಖ ಪರಿಹಾರವನ್ನಾಗಲ್ಲಿ ಚೈತನ್ಯವಾಗಲಿ ಈ ಚೀನಾ ಕಲೆಯಿಂದ ಹೊಂದಲಾರರು. ಆದರೆ ಇಂದಿನ ಸುಸಂಸ್ಕೃತಿ ಶ್ರೀಮಂತ ಹಾಗೂ ಸೋಮಾರಿ ಜನ ಅಸಾಧಾರಣ ಸ್ವಯಂ ಕಲ್ಪಿತವೂ ಮಿತಿಮೀರಿದೆ ಅಭ್ಯಾಸದ ಹೊಸದಾದ ಕಲೆಯನ್ನು ಬಯಸುವವರು ಲೀಲಾ ಜಾಲವಾಗಿ ಎಳೆದು ಆಕಾರದ ರೇಖೆಗಳು ಅರ್ಥವಿಲ್ಲದ ಸಮಸ್ಯಾತ್ಮಕ ಕಲಾಕೃತಿಗಳನ್ನು ನನ್ನನ್ನು ನಾನೇ ವಿನೋಧಗೊಳಿಸಲಿಕ್ಕೆ ಹೂಡಿದ ಆಟಗಳು ಆದ್ದರಿಂದ ನಾನು ಶೀಘ್ರವಾಗಿ ಪ್ರಸಿದ್ಧನಾದೆ.

ಲಾಭ, ಹಣ ಅದೃಷ್ಟ ಎಲ್ಲವು ಕೂಡಿಕೊಂಡು ಕಲಾ ಜಗತ್ತಿನಲ್ಲಿ ಉನ್ನತ ಸ್ಥಾನಗಳಿಸಿದೆ.[೩೮] ಎಂದು ಹೇಳುತ್ತಾರೆ. ಆದರೆ ನಾನು ಏಕಾಂತದಲ್ಲಿದ್ದಾಗ ಮಾತ್ರ ಹಿಂದಿನ ಶ್ರೇಷ್ಠ ಕಲಾವಿದರಾದ ಟೈಟಾನ್, ರೆಂಬ್ರಾಂಟ್ ಮುಂತಾದವರ ಸಾಧನೆ ನೆನಸಿಕೊಂಡು ಮತ್ತು ಅವರೊಡನೆ ಹೋಲಿಕೆಯ ದೃಷ್ಟಿಯಿಂದ ನಾನು ಕಲಾವಿದನೆಂದು ಭಾವಿಸಿಕೊಳ್ಳಲು ಧೈರ್ಯ ಮಾಡಲಾರೆ. ನಾನೊಬ್ಬ ಕೇವಲ

೩೫. ಎಂ.ಟಿ.ವಿ. ಆಚಾರ್ಯ, ಕಲೆ ಮತ್ತು ನಾನು. ಪುಟ : ೧೧೮
೩೬. ಕೆ.ವಿ. ಸುಬ್ರಮಣ್ಯಂ. ಕಲಾ ಸಂವೇದನೆಯ ಒಳನೋಟಗಳು. ಪುಟ : ೨೬
೩೭. ಅನ್ನದಾನಿ ಹಿರೇಮಠ. ಎಂ.ವಿ.ಚೆಟ್ಟಿ. ಪುಟ : ೧೯
೩೮. ಅ.ಲ. ನರಸಿಂಹನ್ ಕರ್ನಾಟಕ ಭಿತ್ತಿಚಿತ್ರ ಪರಂಪರೆ. ಪುಟ : ೧೭೧:೧೦೧

ನನ್ನ ಕಲೆ ಅರಿತುನಡೆದು ರಂಜಿಸಿದ ವ್ಯಕ್ತಿ ಮಾತ್ರ ಎಂದು ಹೇಳಿ ನೈಜ ಕಲೆಯ ಸ್ವತಃ ತಾವೇ ವಿಶ್ಲೇಷಿಸಿದ್ದಾರೆ.

ಕಲಾ ಇತಿಹಾಸದ ಉದ್ದಕ್ಕು ಸೃಷ್ಟಿಯಾದ ಹಲವಾರು ಕಲಾಕೃತಿಗಳು ಮುಖ್ಯವಾಗಿ ತಮ್ಮ ಸಮಕಾಲೀನತೆಯು ದಟ್ಟ ಹೊಳಪನ್ನು ಹೊಂದಿದ್ದ ಕಾರಣದಿಂದಲೆ ಇಂದಿಗೂ ನಮ್ಮನ್ನು ಗಾಢವಾಗಿ ಸ್ಪಂದಿಸುವ ಸಾಮರ್ಥ್ಯವನ್ನು ಹೊಂದಿವೆ. ಆಯಾ ಕಾಲದ ವಿವಿಧ ವಸ್ತು ಆಶಯ ನಿರ್ವಹಣೆಯ ಸಾಮಾಜಿಕ ಸ್ಥಿತಿಗಳನ್ನು ನಿರ್ಧರಿಸುತ್ತೇವೆ. ಅಂಥ ಹೊಳಪನ್ನು ಕೆ. ಜ್ಞಾನೇಶ್ವರ ಅವರು ಶಿಲ್ಪಕಲಾ ಕೃತಿಗಳಲ್ಲಿ ಕಾಣುತ್ತವೆ. ಇದಕ್ಕೆ ಮೂಲ ಪ್ರೇರಣೆ ಕೆ. ಜ್ಞಾನೇಶ್ವರ ಅವರ ಮನೆತನದಲ್ಲಿ ವಿದ್ಯೆ ತಕ್ಕನೆಲ. ತಕ್ಕ ಪರಿಸರ ಮತ್ತು ಉತ್ತಮ ಪರಂಪರೆಯ ಸಂಸ್ಕಾರ ಕಲಾಗುರುಗಳ ಜ್ಞಾನದ ಬೆಳಕು ಇವುಗಳಲ್ಲಿ ದೊರಕಿದ್ದಕ್ಕೆ ಅವರ ಕಲಾ ಪ್ರತಿಭೆ ಫಲವತ್ತಾಗಿ ಬೆಳೆಯಲು ಕಾರಣವಾಯಿತು. ಕಲಾವಿದನಾದವನು ಯಾವ ರೀತಿ ಇರಬೇಕು ಎಂಬ ಭಾವನೆ ನಮ್ಮ ಪ್ರಾಚೀನ ಪರಂಪರೆಯಲ್ಲಿ ಹೇಗೆ ಇತ್ತೋ ಅಂತಹ ಗುಣಗಳನ್ನು ನಾವು ಕೆ. ಜ್ಞಾನೇಶ್ವರ ಅವರಲ್ಲಿ ಕಾಣುತ್ತೇವೆ. ಉದಾಹರಣೆಗೆ ಚಿತ್ರಕಲಾವಿದ ಒಳ್ಳೆಯ ಮನುಷ್ಯನಾಗಿರಬೇಕು, ಸೋಮಾರಿಯಾಗಿರಬಾರದು, ಕೋಪಗೊಳ್ಳಬಾರದು, ಶುದ್ಧ ಜೀವನ ನಡೆಸಲು ಅಧ್ಯಯನಶೀಲನಾದ ಆತ್ಮಸಂಯಮದ ಭಕ್ತಿಮನೋಭಾವದ ಉದಾರ ಹೃದಯದ ದ್ವೇಷಾ ಅಸೂಯೆ ರಹಿತವಾದ ವ್ಯಕ್ತಿಯಾಗಿರಬೇಕು ಎಂದು ಶ್ರೀ ಮಹಾವಜ್ರಭವತಂತ್ರಕೃತಿಯವರು ಹೇಳುತ್ತಾರೆ. ಈ ಎಲ್ಲಾ ಗುಣಗಳನ್ನು ಇವರು ಅತ್ಯಂತ ಶಾದ್ವಿಕರು ಸರಳ ಸಜ್ಜನಿಕೆ ನಿರಾಡಾಂಬರಗಳ ಸಜೀವಮೂರ್ತಿ ನೈಜಕಲಾ ಪರಂಪರೆಯ ಮೌಲ್ಯವನ್ನು ಬದುಕಿಸಿ ಉಳಿಸಿಕೊಂಡು ಬಂದು ನಮ್ಮ ಚಿತ್ರಕಲಾ ಜಗತ್ತಿಗೆ ಹೊಂದಿಕೊಂಡು ಇರುವುದು ಅವರ ಜೀವನದ ವೈಶಿಷ್ಟ್ಯವಾಗಿದೆ. ತಪಸ್ವನೋಬೋತಿಯಲ್ಲಿ ಬೆಳೆದು ಬಂದ ಕಲಾ ಜೀವನದ ತರುಣ ಕಲಾವಿದರಿಗೆ ಮಾರ್ಗದರ್ಶಿ ಮತ್ತು ಸ್ಫೂರ್ತಿದಾಯಕವಾಗಿದೆ ಎಂಬ ಅಂಶವು ಬೆಳಕಿಗೆ ಬರುತ್ತದೆ.

**ಕೆ. ಜ್ಞಾನೇಶ್ವರ ಅವರು ಕಲಾಕೃತಿ ರಚಿಸಲು ಬಳಸಿದ ಸಾಮಗ್ರಿಗಳು**

ಚಿತ್ರಕಲೆಯಲ್ಲಿ ಅವರು ಜಲವರ್ಣ, ತೈಲವರ್ಣ, ಪೆನ್ಸಿಲ್ ಅಕ್ರೇಲಿಕ್ ಮಾಧ್ಯಮದಲ್ಲಿ ಚಿತ್ರರಚನೆಗೆ ಬಳಸಿಕೊಂಡಿದ್ದಾರೆ. ಶಿಲ್ಪಕಲೆ ಗ್ರಾನೈಟ್ ಕಲ್ಲು, ಪ್ಲಾಸ್ಟರ್ ಆಫ್ ಫ್ಯಾರಿಸ್, ಕಂಚು, ಸಿಮೆಂಟ್ ಮಾಧ್ಯಮಗಳನ್ನು ಬಳಸಿಕೊಂಡು ಶಿಲ್ಪಗಳನ್ನು ಮಾಡಿದ್ದಾರೆ.

**ಜಲವರ್ಣಕ್ಕಾಗಿ ಬಳಸಿದ ಕಾಗದ ಹಾಗೂ ರಟ್ಟುಗಳು**

ಕೆ.ಜ್ಞಾನೇಶ್ವರ ಅವರು ಪಾರದರ್ಶಕವಾಗಿ ಜಲವರ್ಣ ಹಾಗೂ ಅಪಾರ ದರ್ಶಿಕೆಯಾದ ಪೋಸ್ಟರ್ ಬಳಸಿ ಚಿತ್ರ ರಚಿಸಿದ್ದಾರೆ. ಇಂತಹ ವರ್ಣಗಳನ್ನು ಉಪಯೋಗಿಸುವಾಗ ಅದಕ್ಕೆ ತಕ್ಕಂತಪ ಕಾಗದಗಳನ್ನು ಬಳಸಿದ್ದಾರೆ. ಪಾರದರ್ಶಕ ಜಲವರ್ಣವು ನಿಸರ್ಗಚಿತ್ರ ರಚಿಸುವಲ್ಲಿ ಅದಕ್ಕಾಗಿ ವಿಶೇಷವಾಗಿ ತಯಾರಿಸಿದ ಕೈಕಾಗದ(Handmade paper)ರನ್ನು ಬಳಸಿಕೊಂಡು ಸಾಕಷ್ಟು ದೃಢತೆಯನ್ನು

ಹೊದಿರುವಷ್ಟೇ ಅಲ್ಲದೇ ಕಾಗದಗಳಲ್ಲಿ ಅನೇಕ ಸಾರಿ ಜಲವರ್ಣಗಳನ್ನು ಲೇಪಿಸಿದರೂ ಕೂಡ ಶಿಥಿಲಗೊಳ್ಳುವುದಿಲ್ಲ. ಈ ಬಗೆಯ ಕಾಗದಗಳಲ್ಲಿ ಜಲದೊಂದಿಗೆ ವರ್ಣಗಳೂ ಆಳ ಪದರಗಳಿಗೆ ಇಳಿದು ಸ್ಥಿರವಾಗಿ ನಿಲ್ಲುತ್ತವೆ. ಅಂತೆಯೇ ಎಷ್ಟೋ ವರ್ಷಗಳಾದರೂ ಅವು ತಾಜತನವನ್ನು ಹೊಂದಿರುತ್ತವೆ. ಇನ್ನೂ ಅಪಾರದರ್ಶಕಗಳಾದ ಪೋಸ್ಟರ್ ವರ್ಣಗಳನ್ನು ಬಳಸುವಾಗ ಕೆಲವು ಚಿತ್ರಗಳಿಗೆ ಬಿಳಿಯ ಡ್ರಾಯಿಂಗ್ ಕಾಗದವನ್ನು ಬಳಸಿದ್ದಾರೆ. ಇನ್ನೂ ಕೆಲವು ಚಿತ್ರಗಳಿಗೆ ಬಣ್ಣದ ಪೋಸ್ಟರ್ ಕಾಗದ ಬಳಸಿ ಆ ಬಣ್ಣವನ್ನೇ ಒಂದು ಆಯಾಮವಾಗಿ ಬಳಸಿಕೊಂಡಿದ್ದಾರೆ. ಇನ್ನು ಕೆಲವು ಚಿತ್ರಗಳಿಗೆ ರಟ್ಟುಗಳನ್ನು (ತೆಳ್ಳನೆಯ ಪ್ಲೇವುಡ್) ಬಳಸಿದ್ದಾರೆ. ಹೀಗೆ ಒಟ್ಟಾರಿಯಾಗಿ ತಾವು ಚಿತ್ರಿಸಿದ ಚಿತ್ರದ ಪರಿಣಾಮ (Effect) ಅದರಲ್ಲಿ ಮೂಡಿ ಬಂದಿದೆ.

**ತೈಲವರ್ಣಚಿತ್ರಗಳಿಗಾಗಿ ಉಪಯೋಗಿಸಿದ ಕಾಗದ ಹಾಗೂ ರಟ್ಟುಗಳು(canvas)**

ತೈಲವರ್ಣ ಚಿತ್ರಗಳಿಗಾಗಿಯೇ ಕಾಗದವನ್ನು ತಯಾರಿಸುತ್ತಾರೆ. ಈ ಕಾಗದಗಳು ಒಂದು ರೀತಿಯ ಒರಟು ಮೇಲ್ಮೈಯನ್ನು ಹೊಂದಿದ್ದು. ವರ್ಣಗಳು ಆಳಕ್ಕೆ ಇಳಿದು ಬಿಗಿಯಾಗಿ ಕಾಗದವನ್ನು ಹಿಡಿದುಕೊಳ್ಳುತ್ತವೆ. ಅಲ್ಲದೇ ಈ ಕಾಗದಗಳು ತೈಲವನ್ನು ಹೀರಿಕೊಳ್ಳದೇ ಆ ಹೊಳಪನ್ನು ಹಾಗೆ ಇರಲು ಸಹಾಯ ಮಾಡುತ್ತದೆ. ಕೆಲವು ಚಿತ್ರಗಳಿಗೆ ಇಂತಹ ಕಾಗದವನ್ನು ಉಪಯೋಗಿಸಿದ್ದಾರೆ. ಹೆಚ್ಚಾಗಿ ತೈಲಚಿತ್ರಗಳನ್ನು ಕ್ಯಾನವಸ್ ಮೇಲೆಯೆ ಚಿತ್ರಿಸಿದ್ದಾರೆ. ಈ ಕ್ಯಾನ್‌ವಾಸ್‌ಗಳು ವಿವಿಧ ಅಳತೆಗಳಲ್ಲಿ ಸಿದ್ದವಾಗಿಯೆ ಸಿಗುತ್ತವೆ. ಕೆಲವು ಬಾರಿ ಕಲಾವಿದರೆ ಅದನ್ನು ತಯಾರಿಸಿಕೊಳ್ಳುತ್ತಾರೆ. ಇನ್ನೂ ಕೆಲವು ಬಾರಿ ಹಾರ್ಡ್‌ಬೋರ್ಡ್ ಮೇಲೆ ನೇರವಾಗಿ ವರ್ಣಗಳನ್ನು ಲೇಪಿಸಿಯು ಚಿತ್ರಗಳನ್ನು ರಚಿಸಿದ್ದಾರೆ.

**ವರ್ಣ ಹಾಗೂ ಕುಂಚಗಳು**

ಜಲವರ್ಣವನ್ನು ದೇಸಿಯ ಉತ್ಪಾನೆಗಳನ್ನು ಬಳಸಿದ್ದರು ಅದರಲ್ಲಿ ಹೆಚ್ಚಾಗಿ ಕಂಪನಿಯ ಕಲಾವಿದರ ವರ್ಣಗಳನ್ನೇ ಬಳಸಿರುವುದು ಅವರ ಸ್ಟುಡಿಯೋ ಗಮನಿಸಿದಾಗ ಕಂಡುಬಂದ ಅಂಶಗಳಾಗಿವೆ. ಅಲ್ಲದೇ ಅವರು ತಮ್ಮ ಮಿತ್ರರು ಯಾರೆ ವಿದೇಶಕ್ಕೆ ಹೋದರು. ಅಲ್ಲಲ್ಲಿ ವಿವಿಧ ನಮೂನೆಯ ವರ್ಣಗಳನ್ನು, ಕುಂಚಗಳನ್ನು ತರಿಸಿ ಅವುಗಳನ್ನು ತಮ್ಮ ಚಿತ್ರಗಳಲ್ಲಿ ದುಡಿಸಿಕೊಡಿದ್ದಾರೆ. ನಾನಾ ರೀತಿಯ ಕುಂಚಗಳನ್ನು ಬಳಸಿಕೊಳ್ಳುವ ಹವ್ಯಾಸ ಕೆ.ಜ್ಞಾನೇಶ್ವರ ಅವರದಾಗಿತ್ತಲ್ಲದೆ ಅವುಗಳ ಬಳಕೆಯ ಕೌಶಲ್ಯದಿಂದಾಗಿ ಅವುಗಳು ಹೊಚ್ಚ ಹೊಸದರಂತೆ ಇವೆ. ಅವರು ಬಣ್ಣದ ತುಡಿ(colorknite)ಯನ್ನು ಬಳಸದೇ ಏನಿದ್ದರೂ ಕುಂಚಗಳ ಮುಖಾಂತರವೆ. ಚಿತ್ರಗಳ ಒಟ್ಟಾರೆ ಪರಿಣಾಮವನ್ನು ಸೆರೆಹಿಡಿದಿದ್ದಾರೆ. ರೇಖಾ ಚಿತ್ರಗಳನ್ನಂತೂ ಪೆನ್ಸಿಲ್ ಇಂಕ್ (ಮಸಿ) ಚಾರ್ಕೋಲ್‌ನಿಂದ ಚಿತ್ರಿಸಿರುವುದನ್ನು ಕಾಣುತ್ತೇವೆ. ಒಳ್ಳೆಯ ಪರಿಣಾಮ ಬೀರಲು ಪೆನ್ಸಿಲ್‌ಗಳು ಒಳ್ಳೆಯ ಮಾಧ್ಯಮವೆಂದು ಅವರ ಅಭಿಪ್ರಾಯವಾಗಿತ್ತು. ಪೇಂಟಿಂಗ್‌ಗಿಂತ ಪೆನ್ಸಿಲ್‌ಗಳಿಂದ ಚಿತ್ರಗಳು ಬಹಳ ನೈಜ ಪರಿಣಾಮವನ್ನು

ತತ್‌ಕ್ಷಣದಲ್ಲಿ ನೋಡಬಹುದೆಂದು ಅಲ್ಲದೆ ಇವು ಬಹಳ ವರ್ಷಗಳವರೆಗೆ ಬಾಳಿಕೆ ಬರುವವು. ಚಾರ್‌ಕೋಲಿನ ಈ ಪರಿಣಾಮ ಬಂದರು ಅವುಗಳನ್ನು ಕಾಯ್ದಿರಿಸುವುದು ಬಹಳ ಕಷ್ಟದ ಕೆಲಸ. ಅಂತೇಯೆ ಇವರು ಚಿತ್ರಗಳಿಗಾಗಿ ಪೆನ್ಸಿಲ್ ಅನ್ನೋ ಹೆಚ್ಚು ಉಪಯೋಗಿಸಿದ್ದಾರೆ.

**ಶಿಲ್ಪ ಕಲಾಕೃತಿಗಳಿಗೆ ಬಳಸಿದ ಸಾಮಗ್ರಿಗಳು**

ಶಿಲ್ಪಕಲೆ ಸಾವಿರಾರು ವರ್ಷಗಳ ಹಿಂದಿನಿಂದ ರಚನೆಯಾಗುತ್ತ ಬಂದಿವೆ. ಶಿಲ್ಪ ಎಂದರೇನು? ಜಡವಸ್ತುವಿನಲ್ಲಿ ವಾಸ್ತವಿಕ ಅಥವಾ ಕಾಲ್ಪನಿಕ **ಆಕೃತಿಯೊಂದನ್ನು ರೂಪಿಸುವುದನ್ನು ಶಿಲ್ಪ ಎಂದು ಕರೆಯಬಹುದಾಗಿದೆ.**

**ಕೆ. ಜ್ಞಾನೇಶ್ವರ ಅವರು ರಚಿಸಿದ ಶಿಲ್ಪ ಕಲಾಕೃತಿಗಳಿಗೆ ಬಳಸಿದ ಕಲಾ ಸಾಮಗ್ರಿಗಳು**

ಮಣ್ಣಿನ ಮಾಧ್ಯಮದ ಕಲಾಕೃತಿ ರಚಿಸಲು ಬಳಸಿದ ಕಲಾ ಸಾಮಗ್ರಿಗಳು; ಮೊದಲಿಗೆ ಯಾವ ರೀತಿಯ ಮಣ್ಣಿನ ಕಲಾಕೃತಿಯನ್ನು ರಚಿಸುತ್ತೇವೆ ಎಂಬುದನ್ನು ಕರಡು ಚಿತ್ರಣ ಮಾಡಿಕೊಳ್ಳಬೇಕು. ನಂತರ ಎಷ್ಟು ಅಳತೆ ಮತ್ತು ಅದಕ್ಕೆ ಬೇಕಾದ ಮಣ್ಣು ಅಂದರೆ ಮಣ್ಣಿನ್ನು ಮೂರು ದಿನ ಅಥವಾ ಒಂದು ವಾರ ಮುಂಚಿತವಾಗಿ ನೀರಿನಿಂದ ನೆನಸಿ ಇಡಬೇಕು. ಆಕೃತಿಗೆ ಬೇಕಾದ ಹುಲ್ಲು ಮತ್ತು ಸುತ್ತಲಿಯನ್ನು ತೆಗೆದುಕೊಳ್ಳಬೇಕು. ನಂತರ ಕಲಾಕೃತಿಯು ಹೇಗಿರಬೇಕು ಎಂದುಕೊಳ್ಳುತ್ತೇವೊ ಅದೇ ರೀತಿ ಮೊದಲಿಗೆ ಹುಲ್ಲಿನ ಆಕಾರವನ್ನು ಅನಾಟಮಿಯ ಪ್ರಕಾರ ಮಾಡಿಕೊಳ್ಳಬೇಕು. ಅದರ ಮೇಲೆ ಮಣ್ಣನ್ನು ಹಾಕಿ ತಮಗೆ ಬೇಕಾದ ರೂಪವನ್ನು ಅದರಲ್ಲಿ ಮೂಡಿಸಬಹುದು. ನಂತರ ಕೆಲಸ ಮುಗಿಯುವ ವರೆಗೆ ಹಸಿಬಟ್ಟೆಯಿಂದ ಆ ಕಲಾಕೃತಿಯನ್ನು ಮುಚ್ಚಿಡಬೇಕು ಮಾಡಿಕೊಂಡು ಕಲಾಕೃತಿಯನ್ನು ಪೂರ್ಣಗೊಳಿಸುತ್ತಿದ್ದರು.

**ಕಲ್ಲಿನ ಮಾಧ್ಯಮ ಕಲಾಕೃತಿ ರಚಿಸಲು ಬಳಸಿದ ಸಾಮಗ್ರಿಗಳು**

ಕೆ.ಜ್ಞಾನೇಶ್ವರ ಅವರು ಶಿಲ್ಪಗಳಲ್ಲಿ ನಾವು ಕಾಣಬಹುದಾದ ಸರಳತೆ ಮತ್ತು ತ್ರಿಮಾನ ಗುಣಗಳು ಹೊಯ್ಸಳ ಶಿಲ್ಪ ಶೈಲಿಯಲ್ಲಿ ಕಂಡುಬರುವ ಅಲಂಕಾರಗಳನ್ನು ನಾವು ಇವರ ಶಿಲ್ಪಗಳಲ್ಲಿ ನೋಡಬಹುದಾದರೂ ಅವುಗಳನ್ನು ತಮ್ಮದೇ ಶೈಲಿಯಲ್ಲಿ ಬಳಸಿಕೊಂಡಿರುವುದನ್ನು ಕಾಣಬಹುದು. ಶಿಲ್ಪಗಳ ಪ್ರತಿಯೊಂದು ಭಾಗವು ನಾಜೂಕಾಗಿ ಅಲಂಕರಿಸುವಾಗ ತೀರಾ ಕ್ಲಿಷ್ಟತೆ ಎಲ್ಲಿಯು ಇರುತ್ತದೆ. ಮತ್ತು ಅದನ್ನು ಅತಿ ಸೂಕ್ಷ್ಮವಾಗಿ ಹಾಗೂ ಆಕರ್ಷಣೀಯಾವಾಗಿರುವಂತೆ ರಚಿಸಬೇಕಾಗುತ್ತದೆ. ಹೊಯ್ಸಳ ಶಿಲ್ಪಗಳ ಮಹಾತ್ಮೆಯನ್ನು ಮತ್ತು ವಸ್ತುವಿಷಯವನ್ನು, ಅಲಂಕಾರ ವಿನ್ಯಾಸಗಳನ್ನು ಹಲವಾರು ಹಂತಗಳಲ್ಲಿ ಬಳಸಿಕೊಡಿದ್ದಾರೆ.

**ನೀಲ ನಕ್ಷೆ**

ಕೆ. ಜ್ಞಾನೇಶ್ವರ ಅವರು ಚಿತ್ರಕಲೆ ಮತ್ತು ಶಿಲ್ಪಕಲೆಗಳನ್ನು ಅಷ್ಟೇ ರಚಿಸದೇ, ದೇವಾಲಯಗಳ ಗೋಪುರದ ನೀಲ ನಕ್ಷೆಯನ್ನು ಸಹ ರಚಿಸುವಲ್ಲಿ ಸಿದ್ಧಹಸ್ತರಾಗಿದ್ದಾರೆ. ನಿರ್ಮಿಸಬೇಕಾಗಿರುವ

ಕಟ್ಟಡದ ಅಥವಾ ಶಿಲ್ಪಕ್ಕೆ ಸಂಬಂಧಿಸಿದಂತೆ ನೀಲನಕ್ಷೆಯನ್ನು ರಚಿಸಬೇಕಾದದ್ದು ಅಗತ್ಯ ಸಂಬಂಧಿಸಿದ ಕರಡು ನಕ್ಷೆಯನ್ನು ತಂತ್ರಜ್ಞಾನದ ಮೂಲಕ ರಚಿಸಬೇಕಾಗುತ್ತದೆ. ಇಂದಿನ ದಿನಗಳಲ್ಲಿ ತಂತ್ರಜ್ಞಾನವು ಬಹಳ ಮುಂದುವರೆಯುವುದರಿಂದ ನಮಗೆ ಬೇಕಾದ ಫಲಿತಾಂಶವನ್ನು ಗಣಕಯಂತ್ರದ ಸಹಾಯದಿಂದ ಪಡೆಯಲು ಅನುಕೂಲವಾಗಿದೆ. ಕಟ್ಟಡ ವಿನ್ಯಾಸ, ವಿಸ್ತರಣೆ, ಯಥಾದರ್ಶನ ವಿಭಾಗವಾಗುವ ಸೂಕ್ಷ್ಮ ಅಳತೆ ಮುಂತಾದವುಗಳನ್ನು ನಿಖರವಾಗಿ ತಿಳಿದುಕೊಳ್ಳಲು ಇಂದು ಗಣಕಯಂತ್ರವನ್ನು ಬಳಸಿಕೊಳ್ಳಲಾಗುತ್ತದೆ. ಇದರಿಂದಾಗಿ ಸ್ಪಷ್ಟ ಮತ್ತು ಶೀಘ್ರ ಫಲಿತಾಂಶವನ್ನು ಪಡೆಯಲು ಸಹಾಯವಾಗುತ್ತದೆ. ಅಗತ್ಯವಿದ್ದಲ್ಲಿ ಬದಲಾವಣೆಗಳನ್ನು ಕೂಡ ಮಾಡಿಕೊಳ್ಳಬಹುದಾಗಿದೆ.

ಶಿಲ್ಪದ ನೀಲನಕ್ಷೆಯು ಸಿದ್ದವಾದ ನಂತರ ತ್ರಿಮಾನದಲ್ಲಿ ಅದರ ಫಲಿತಾಂಶವನ್ನು ತಿಳಿಯಲು ರಚನೆಯಾಗಬೇಕಾಗಿರುವ ಮೂರ್ತಿ ಅಥವಾ ಕಟ್ಟಡದ ಕಿರು ಮಾದರಿಯೊಂದನ್ನು ಮಣ್ಣು, ಪ್ಲಾಸ್ಟರ್ ಅಥವಾ ಫೈಬರ್ ಗ್ಲಾಸ್‌ನಲ್ಲಿ ರಚಿಸಲಾಗುತ್ತದೆ. ಸಾಮಾನ್ಯವಾಗಿ ಮಣ್ಣಿನಲ್ಲಿ ಈ ಶಿಲ್ಪದ ಸಂಪೂರ್ಣ ಚಿತ್ರ ದೊರೆತಂತಾಗುತ್ತದೆ. ಮುಂದೆ ಇದನ್ನು ವಿಸ್ತರಿಸಿಕೊಳ್ಳಲು ಅನುಕೂಲವಾಗುತ್ತದೆ. ಆ ಮೂಲಕ ಗ್ರಾಹಕರಿಗೆ ತಮ್ಮ ಶಿಲ್ಪ ಅಥವಾ ಕಟ್ಟಡದ ಕುರಿತು ಮನದಟ್ಟು ಮಾಡಿಕೊಳ್ಳಲು ಅನುಕೂಲವಿದೆ ಎನ್ನುವುದು ಅವರ ಅಭಿಪ್ರಾಯವಾಗಿದೆ.

**ಶಿಲ್ಪ ರಚನೆ**

ಶಿಲ್ಪ ರಚನೆಯನ್ನು ಮಾಡುವ ಮೊದಲು ಹಂತಗಳು ಕಟ್ಟಡ ನಿರ್ಮಾಣವಾಗ ಬೇಕಾಗಿರುವ ಜಾಗದ ಮಣ್ಣಿನ ಪರೀಕ್ಷೆ ನಡೆಸಿ ಅದರ ಆಧಾರದಲ್ಲಿ ಆ ಸ್ಥಳಕ್ಕೆ ಅಗತ್ಯವಿರುವ ರೀತಿಯಲ್ಲಿ ತಳಪಾಯ ಹಾಕಿಕೊಳ್ಳಲಾಗುತ್ತದೆ. ಈ ತಳಪಾಯವು ಆ ಕಟ್ಟಡದ ಸಂಪೂರ್ಣ ಭಾರವನ್ನು ಹೊರುವಂತೆ ಬಲಿಷ್ಟವಾಗಿರಬೇಕಾಗುತ್ತದೆ. ಅದಕ್ಕೆ ಬೇಕಾದಂತೆ ಉಕ್ಕಿನ ಸರಳುಗಳನ್ನು, ಕಲ್ಲುಗಳನ್ನು ಮತ್ತು ಸಿಮೆಂಟಿನ ಮಿಶ್ರಣವನ್ನು ಉಪಯೋಗಿಸಿಕೊಳ್ಳಲಾಗುತ್ತದೆ. ಇದರಿಂದ ಆ ಜಾಗಕ್ಕೆ ಅಲ್ಲಿ ರಚಿಸಲಾಗುವ ಶಿಲ್ಪವನ್ನು ಅಥವಾ ಕಟ್ಟಡದ ಭಾರವನ್ನು ತಾಳಿಕೊಳ್ಳಲು ಸಾಧ್ಯವಾಗುತ್ತದೆ. ನಂತರದ ಹಂತದಲ್ಲಿ ಶಿಲ್ಪವನ್ನು ಹೊಂದಿರುವ ಪೀಠವನ್ನು ರಚಿಸಲಾಗುತ್ತದೆ. ಈ ಪೀಠದ ಭಾರವು ಒಳಭಾಗದಲ್ಲಿ ಟೊಳ್ಳಾಗಿರುವಂತೆ ರಚಿಸುವುದು ಮತ್ತು ಇದನ್ನು ಬಹುಪಯೋಗಿ ಸ್ಥಳಾವಕಾಶವನ್ನಾಗಿ ದುಡಿಸಿ ಕೊಳ್ಳುವುದು ಜ್ಞಾನೇಶ್ವರ ಅವರ ತಂತ್ರಗಾರಿಕೆಯಾಗಿರುತ್ತದೆ.

ಪೀಠದ ಮೇಲೆ ಮೂರ್ತಿಯ ಟಥವಾ ಆಕಾರಕ್ಕೆ ಸರಿಯಾಗಿ ಬಲವಾದ ಕಬ್ಬಿಣದ ಉಕ್ಕಿನ ಸರಳುಗಳನ್ನು ಮತ್ತು ಮೂಲ ಆಕಾರವನ್ನು ಮಾಡಿಕೊಳ್ಳಲಾಗುತ್ತದೆ. ಇದೆಲ್ಲಾ ಮೂಲ ಶಿಲ್ಪದ ಒಟ್ಟು ಆಧಾರವಾಗಿರುತ್ತದೆ. ಮುಖದ ಭಾವವು ಪ್ರಮಾಣ ಬದ್ಧವಾಗಿರಲು ಮತ್ತು ಆಕರ್ಷಕವಾಗಿರಲು ಫೈಬರ್ ಗ್ಲಾಸ್‌ನಿಂದ ತಯಾರಿಸಲಾದ ಅಚ್ಚುಗಳನ್ನು ಬಳಸುತ್ತಾರೆ. ಪ್ರಾಥಮಿಕ ಆಕಾರವನ್ನು ಸಿಮೆಂಟ್, ಮರಳು, ಇಟ್ಟಿಗೆ ಇತ್ಯಾದಿಗಳನ್ನು ಬಳಸಿಕೊಂಡು ನಂತರ ಬದಲಾವಣೆಗಳೇನಾದರೂ ಇದ್ದರೆ

ಸರಿಮಾಡಿಕೊಂಡು ಅಂತಿಮ ಸ್ಪರ್ಶ ನೀಡಲಾಗುತ್ತದೆ.

ಶಿಲ್ಪ ಪೂರ್ಣಗೊಂಡ ನಂತರ ಶಿಲ್ಪದ ದೀರ್ಘ ಬಾಳಿಕೆ ಉದ್ದೇಶದಿಂದ ಲೋಹ ಲೇಪನ ಮತ್ತು ವರ್ಣಲೇಪನ ಮಾಡಲಾಗುತ್ತದೆ. ಶಿಲ್ಪದ ಅಂತಿಮ ಹಂತದಲ್ಲಿ ತಾಮ್ರ, ಹಿತ್ತಾಳೆ ಅಥವಾ ಜಿಂಕ್‌ನ ಲೇಪನ ಮಾಡಿ ವಾತಾವರಣಕ್ಕೆ ಪೂರಕವಾಗುವಂತಹ ರಾಸಾಯನಿಕ ವರ್ಣಗಳಿಂದ ಮತ್ತು ಅಲ್ಯುಮಿನಿಯಂ ಬಣ್ಣಗಳಿಂದ ಶಿಲ್ಪಗಳನ್ನು ಪೂರ್ಣಗೊಳಿಸಲಾಗುತ್ತದೆ. ಹೀಗೆ ಶಿಲ್ಪವು ಹಲವಾರು ಹಂತಗಳನ್ನು ದಾಟಿ ನೋಡುಗರಿಗೆ ಆಕರ್ಷಕವಾಗುವಂತೆ ನಿರ್ಮಿಸಲಾಗುತ್ತದೆ. ಶಿಲ್ಪವು ಬೃಹತ್ ಆಗಿ ಸುತ್ತಲಿನ ಜಾಗವು ವಿಶಾಲವಾಗಿರಬೇಕಾಗುತ್ತದೆ. ಒಂದು ಶಿಲ್ಪವು ಸಣ್ಣ ಆಕಾರದಲ್ಲಿ ನಾವು ನೋಡುವುದಕ್ಕೂ ಬೃಹದಾಕಾರದಲ್ಲಿ ನೋಡುವುದಕ್ಕೂ ವ್ಯಾತ್ಯಾಸವಿದೆ. ಸಣ್ಣ ಶಿಲ್ಪಗಳಲ್ಲಿ ನಾವು ಸೂಕ್ಷ್ಮ ಅಲಂಕಾರವನ್ನು ಕಾಣುವ ಹಾಗೆ ಶಿಲ್ಪಗಳಲ್ಲಿ ರಚಿಸಬೇಕಾಗುತ್ತದೆ. ಆಗ ಅವು ಸರಳೀಕರಣ ಗೊಂಡಂತಾಗುತ್ತವೆ. ಕೆಲವೊಮ್ಮೆ ಇವು ಚಪ್ಪಟೆ ಎಂದೆನಿಸಬಹುದಾದ ಸಾಧ್ಯತೆ ಇರುತ್ತದೆ.

**ಶಿಲ್ಪ ರಚನೆಗೆ ಬಳಸುವ ಸಾಮಗ್ರಿಗಳು**

ಫ್ಲಾಟ್ ಉಳಿ, ಚಾಣಾ ಉಳಿ, ಭಾಗಿ ಉಳಿ, ಪೈಂಟ ಉಳಿ, ಉಗುರ ಉಳಿ, ಕಡೆ ಉಳಿ, ಹಲ್ಲಿ ಉಳಿ, ರೇಖೆ ಉಳಿ, ಸುತಿಗೆ, ಉಳಿ ಇತ್ಯಾದಿಗಳನ್ನು ತಮ್ಮ ಕಲಾಕೃತಿ ರಚನೆಯಲ್ಲಿ ಬಳಸಿಕೊಳ್ಳುತ್ತಿದ್ದರು.

ಈ ರೀತಿಯಲ್ಲಿ ಹೊಯ್ಸಳ ಶೈಲಿಯನ್ನು ತಮ್ಮ ಶೈಲಿಯಲ್ಲಿ ಅಳವಡಿಸಿಕೊಂಡು ಶಿಲ್ಪಿ ರಚನೆಯನ್ನು ಮಾಡುತ್ತಾ ಬಂದಿದ್ದಾರೆ. ಜ್ಞಾನೇಶ್ವರ ಅವರು ವರ್ಣ ಚಿತ್ರಗಳು, ರೇಖಾ ಚಿತ್ರಗಳು, ಶಿಲ್ಪ ಕಲಾಕೃತಿಗಳು ಹೀಗೆ ಎರಡನ್ನು ಕಲಾಪ್ರಪಂಚದಲ್ಲಿ ಒಳ್ಳೆಯ ಕಲಾವಿದ ಎಂಬ ಹೆಸರು ಗಳಿಸಿದ್ದಾರೆ. ಜ್ಞಾನೇಶ್ವರ ಅವರಿಗೆ ಅಭಿಜಾತ ಕಲಾವಿದರೆಂದರೆ ತಪ್ಪಾಗಲಾರದು.

ಜ್ಞಾನೇಶ್ವರ ಅವರು ಶಿಲ್ಪದ ಅಲಂಕಾರಗಳು ಮತ್ತು ವಿನ್ಯಾಸಗಳನ್ನು ಆಯಾ ಜಾಗಕ್ಕೆ ಬೇಕಾದ ರೀತಿ ಶಿಲ್ಪಗಳಲ್ಲಿ ಅಳವಡಿಸುತ್ತಿದ್ದರು. ಈ ರೀತಿಯಲ್ಲಿ ಜ್ಞಾನೇಶ್ವರವರು ತಮ್ಮ ಕಲಾಕೃತಿಗಳಲ್ಲಿ ಅವರ ಮನೆತನ ಹಾಗೂ ಅಲ್ಲಿಯ ವಾತಾವರಣದ ದೇವಾಲಯಗಳ ಶಿಲ್ಪದ ಪ್ರಭಾವದಿಂದ ಮತ್ತು ಅವರ ಮುತ್ತಾತ ಶಿಪ್ಪಾಜಿಯವರ ಪ್ರಭಾವದಿಂದ ಕಲಾಪ್ರಪಂಚದ ಹಾದಿಯಲ್ಲಿ ನಡೆಯುತ್ತಿದ್ದಾರೆ. ತಮ್ಮದೇ ಸ್ವಂತಶೈಲಿ ಬಳಸಿ ಕಲಾಕೃತಿಗಳನ್ನು ರಚಿಸುವುದು ಅವರ ವಿಶೇಷವೆನ್ನಬಹುದು.

ಒಟ್ಟಾರೆ ಈ ಅಧ್ಯಯನದಿಂದ ಜ್ಞಾನೇಶ್ವರವರಿಗೆ ಪ್ರಭಾವ, ಪ್ರೇರಣೆ ಎಲ್ಲಾ ದೊರೆತಿದ್ದು ಅವರ ವಂಶದ ಎಲ್ಲಾ ಸದಸ್ಯರಿಂದ ಹಾಗೂ ಬೆಲೆಯುತ್ತ ಕಲಾ ಶಿಕ್ಷಣದಲ್ಲಿ ಗುರುವಾಗಿ ದೊರೆತ ಹಾಳ್‌ಜೋಳ ಅವರಿಂದ. ಮುಖ್ಯವಾಗಿ ಇದಕ್ಕೆಲ್ಲಾ ಪ್ರೋತ್ಸಾಹಕೊಟ್ಟ ಜ್ಞಾನೇಶ್ವರವರ ತಂದೆ-ತಾಯಿ, ಮುತ್ತಾತ ಶಿಪ್ಪಾಜಿಯವರು ಹಾಗೂ ಭಾವಜೀವನದಲ್ಲಿ ಅವರ ಪತ್ನಿ ಗಿರಿಜಾ ಅವರು ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಕಲಾಭಿಮಾನಿಗಳು, ಕಲೆಯನ್ನು ಇಷ್ಟಪಡುವ ಸಹೃದಯಗಳು ಎಲ್ಲರೂ ಸಹ ಜ್ಞಾನೇಶ್ವರವರು ಹೊಸ ತಂತ್ರಗಾರಿಕೆ ಶೈಲಿಯನ್ನು ಬಳಸಿ ಕಲಾಕೃತಿ ರಚನೆ ಮಾಡಿದಾಗ

ಪ್ರೋತ್ಸಾಹಿಸಿದ ಜನರು. ಈ ಅಂಶಗಳಿಂದ ಜ್ಞಾನೇಶ್ವರವರು ಸಮಾಜದಲ್ಲಿ ತಮ್ಮ ಬದುಕಿನಲ್ಲಿ ಒಂದು ಸ್ಥಾನಮಾನವನ್ನು ಪಡೆಯಲು ಕಾರಣವಾಗಿದೆ. ತಮ್ಮ ಮನೆತನದವರಿನ ತಮ್ಮ ಕಲೆಗೆ ಬೆಲೆ, ಪ್ರಭಾವ, ಪ್ರೇರಣೆ ಇವೆಲ್ಲಾ ದೊರೆಯುತ್ತಿದ್ದರಿಂದ ಜ್ಞಾನೇಶ್ವರ ಅವರು ನಮ್ಮ ಮುಂದೆ ಒಬ್ಬ ಗೌರವ ಸ್ಥಾನ ಪಡೆದ ಮಹಾನ್ ಕಲಾವಿದರಾಗಿ ಕರ್ನಾಟಕದ ಜನತೆಯ ಮದ್ಯ ಕಲಾಕ್ಷೇತ್ರದಲ್ಲಿ ಅನೇಕ ಕಲಾಕೃತಿಗಳನ್ನು ರಚಿಸಿ ಗಣ್ಯ ವ್ಯಕ್ತಿಯ ನಮ್ಮ ಕಣ್ಣಿನಲ್ಲಿ ಅಚ್ಚುಳಿದಿದ್ದಾರೆ ಎಂದು ಹೇಳಬಹುದು ಈ ರೀತಿಯ ಒಂದು ಪ್ರಭಾವ ಪ್ರೇರಣೆ, ಪ್ರೋತ್ಸಾಹ ಎಲ್ಲಾರ ಜೀವನದಲ್ಲಿ ಇದ್ದಾರೆ. ಎಲ್ಲರೂ ಅವರವರ ಗುರಿಯನ್ನು ತಲುಪುದರಲ್ಲಿ ಸದೇಹವೇ ಇಲ್ಲವೆಂದು ಹೇಳಬಹುದು.

* * *






■ ಪ್ರಶಸ್ತಿ ಪುರಸ್ಕಾರಗಳೊಂದಿಗೆ ಕಲಾವಿದರು



■ ಕಲಾವಿದರೊಂದಿಗೆ ಚರ್ಚಿಸುತ್ತಿರುವ ಲೇಖಕಿ

■ ಶಿಲ್ಪ ಕೆತ್ತುವ ಕಾಯಕದಲ್ಲಿ ತೊಡಗಿರುವ ಕಲಾವಿದರು





ರಚನಾ ಹಂತದಲ್ಲಿರುವ ನಿಮೀಶಾಂಭಾ ಶಿಲ್ಪ ಮತ್ತು ರಾಜನ ಶಿಲ್ಪ

## ಕೆ. ಜ್ಞಾನೇಶ್ವರ ಅವರ ಕಲಾ ಚಟುವಟಿಕೆಗಳು

ಕಲಾ ಚಟುವಟಿಕೆ ಎಂಬುದು ಕಲಾವಿದನೊಬ್ಬ ತಿಳಿಯದೆಯೋ ತನ್ನ ಕ್ಷೇತ್ರದಲ್ಲಿ ತೊಡಗಿಸಿಕೊಂಡು ತನ್ನನ್ನು ತಾನು ಕ್ಷೇತ್ರವನ್ನು ಬೆಳಸುತ್ತಾ ಅನಂತರದಲ್ಲಿ ಲೀನವಾಗುವ ಮೊದಲು ತನ್ನ ಹೆಜ್ಜೆ ಗುರುತುಗಳನ್ನು ಹಿಂಬಾಲಿಸುತ್ತಿರುವವರಿಗೆ ದಾರಿದೀಪವಾಗಿ ಬಿಟ್ಟು ಹೋಗುವ ಕಲಾ ಪ್ರಕ್ರಿಯೆಯ ನಿದರ್ಶನವನ್ನು ಕಾಣಬಹುದು. ಪ್ರಸ್ತುತ ಸಂದರ್ಭದಲ್ಲಿ ಕಲಾಚಟುವಟಿಕೆ ಹಾಗೂ ಕಲೆಯ ಹುಟ್ಟು ಬೆಳವಣಿಗೆಗಳನ್ನು ತಿಳಿದುಕೊಳ್ಳಬೇಕಾದ್ದು ತುಂಬಾ ಅಪೇಕ್ಷಣಿಯವಾಗಿದೆ. ಏಕೆಂದರೆ ಕಲೆ ಮತ್ತು ಕಲಾ ಚಟುವಟಿಕೆಗಳು ಮಾನವನ ನಾಗರೀಕತೆ ಬೆಳವಣಿಗೆಯಲ್ಲಿ ಒಂದೇ ನಾಣ್ಯದ ಎರಡು ಮುಖಗಳಂತೆ ಅಭೇದ್ಯವೂ ಹಾಗೂ ಅವಶ್ಯವೂ, ಪರಸ್ಪರ ಅವಲಂಬಿಯೂ ಆಗಿರುವುದರಿಂದ ಈ ಕಲಾ ಚಟುವಟಿಕೆಯನ್ನು ಕಲಾ ಇತಿಹಾಸದ ವಿದ್ಯಾರ್ಥಿಯ ದೃಷ್ಟಿಯಲ್ಲಿ ಅವಲೋಕಿಸಬೇಕಾಗಿದೆ. ನಾಗರೀಕತೆ ಆರಂಭಕಾಲದ ಗುಹಾ ಚಿತ್ರಗಳಿಂದ ಹಿಡಿದು ಧರ್ಮದ ಬೆಳವಣಿಗೆಯ ಸಂದರ್ಭದಲ್ಲಿನ ಧಾರ್ಮಿಕ ಚಿತ್ರಗಳವರೆಗೆ ಮತ್ತು ಅರಮನೆ, ಗುರುಮನೆ(ಮಠ)ಗಳ ಒಳಾಂಗಣದ ಅಲಂಕರಣದಲ್ಲಿ ಆ ಮೂಲಕ ಅವುಗಳಿಗೊಂದು ಪ್ರತ್ಯೇಕ ವ್ಯಕ್ತಿತ್ವವನ್ನು ನಿರ್ಮಿಸಿ ಕೊಡುವ ನಿಟ್ಟಿನಲ್ಲಿ ಕಲೆ ಹಾಗೂ ಕಲಾಚಟುವಟಿಕೆಗಳು ಸುತ್ತಮುತ್ತಲಿನ ಸಮಾಜಕ್ಕೆ ಅತ್ಯಂತ ಅವಶ್ಯವಾದಂತವೂಗಳಾಗಿದ್ದವು. ೧೮ನೇ ಶತಮಾನದಲ್ಲಿ ಅವಿಷ್ಕಾರಗೊಂಡ ಕ್ಯಾಮೆರಾ ಹಾಗೂ ಔದ್ಯೋಗಿಕರಣಗಳ ಕಾರಣಗಳಿಂದಾಗಿ ಕಲೆ ಮತ್ತು ಕಲಾವಿದರು ಸ್ವಲ್ಪ ಮಟ್ಟಿಗೆ ಸಮಾಜ ವರ್ಗದವರಿಂದ ನಿರ್ಲಕ್ಷಕ್ಕೊಳಗಾದರೂ ಫಿನಿಕ್ಸಪಕ್ಷಿಯಂತೆ ಈ ಜನಗಳ (ನವ್ಯಕಲಾ ಪಂಥಗಳು) ಮುಖಾಂತರ ಮರುಜನ್ಮ ಪಡೆದದ್ದನ್ನು ಇತಿಹಾಸದಿಂದ ತಿಳಿದುಬಂದ ವಿಷಯವಾಗಿದೆ. ಅಷ್ಟೋತ್ತಿಗಾಗಲೇ ನಾಗರೀಕ ವರ್ಗದಲ್ಲಿ ಕಲಾವಿದ ವರ್ಗವು ಒಂದು ಅಸ್ತಿತ್ವ ಪಡೆದ ಸಣ್ಣವರ್ಗವಾಗಿ ಬೆಳೆದುಬಂದಿತ್ತು. ಇಂಥ ವರ್ಗದ ಸಾಮಾಜಿಕ ಜವಾಬ್ದಾರಿಗಳನ್ನು ತಿಳಿಸಲು ಕಲಾಪ್ರದರ್ಶನಗಳು ಕಾರ್ಯಗಾರಗಳು, ಕಲಾಸಂವಾದಗಳು, ಕಲಾಸಾಹಿತ್ಯವು ಹಾಗೂ ಕಲೆಯ ಮುಂಚಿನ ರಾಜಕೀಯ ವಿಶ್ಲೇಷಣೆಗಳು ಹಾಗೂ ವಿಡಂಬಣೆಗಳ ಮುಖಾಂತರ ತನ್ನ ಜವಾಬ್ದಾರಿಗಳನ್ನು ನಿರ್ವಹಿಸಬೇಕಾದ

ಅಗ್ರ ಪಂಕ್ತಿಯ ಬುದ್ದಿ ಜೀವಿಗಳ ಮಟ್ಟಕ್ಕೆ ಈ ಕೆಲವರ್ಗವು ತನ್ನ ಕಲಾಚಟುವಟಿಕೆಗಳ ಮೂಲಕ ಏರಿ ಸಮಾಜದ ನಿರ್ಲಕ್ಷಿತ ವರ್ಗಗಳ ಧ್ವನಿಯಾಗಿ ಮನುಷ್ಯನ ಬೇಕು ಬೇಡಗಳ ಔದ್ಯೋಗಿಕರಣಕ್ಕೆ ಶಡ್ಡು ಹೊಡೆದು ನಿಂತಿದ್ದನ್ನು ನೋಡಿದರೆ ಎಂಥವನಿಗಾದರೂ ಕಲಾವಿದರ ಶಕ್ತಿಸಾಮರ್ಥ್ಯದ ಅವನ ಕಲಾಚಟುವಟಿಕೆಗಳ ಜರೂರತ್ತಿನ ಅರಿವಾಗದೆ ಇರದು. ಚಿತ್ರಕಾರನಿಗೆ ಪದಗಳು ಬೇಕಿಲ್ಲ; ಆತನಿಗೆ ಬೇಕಾದದ್ದು ಸೂಕ್ಷ್ಮದೃಷ್ಟಿಯ ವಿಮರ್ಶನಾ ಶಕ್ತಿ ಪ್ರಕೃತಿಯಲ್ಲಿ ಕಂಡುಬರುವ ವರ್ಣ, ರೂಪ ಮತ್ತು ಪ್ರಮಾಣಗಳನ್ನು ವ್ಯಕ್ತಗೊಳಿಸುವುದು ಕಲೆಯು ಸುಲಲಿತ ಛಂದೋಬದ್ಧವಾದ ಮಾತುಗಳ ಜೋಡಿಕೆಯಿಂದ ಇಂಥ ಸೊಬಗಿನ ಸೃಷ್ಟಿ ಮಾಡಿದರೆ ಕಲಾವಿದನು ತನ್ನ ರೇಖೆಗಳಿಂದ, ಬಣ್ಣಗಳಿಂದ ಆ ಅತಿಶಯ ಸನ್ನಿವೇಶವನ್ನು ಕಲ್ಪಿಸಿ ಆನಂದವನ್ನು ಮೂರ್ತಿಗೊಳಿಸುವನು. ಇಂಥಹ ವ್ಯಕ್ತಿತ್ವವನ್ನು ಕಂಡುಕೊಂಡ ಜ್ಞಾನೇಶ್ವರ ಅವರು ಬಾಲ್ಯದಲ್ಲಿಯೆ ಕಲೆಯ ಆಸಕ್ತಿಯನ್ನು ಹೊಂದಿದ್ದರು ತಮ್ಮ ಮುತ್ತಾತ ತಿಪ್ಪಾಜಿ ತಾತ ಪರಶುರಾಮಪ್ಪ, ಅಣ್ಣ ಕಾಶೀನಾಥ ಇಂಥಹ ಕಲಾವಿದರು ಕುಟುಂಬದಲ್ಲಿ ಬೆಳೆದು ಬಂದ ಜ್ಞಾನೇಶ್ವರ ಅವರಿಗೆ ಕಲೆಯಲ್ಲಿ ತುಂಬಾ ಆಸಕ್ತಿ ಇತ್ತು. ತಂದೆಯು ಸಹ ಕಲಾವಿದರು ಆಗಿದ್ದರು. ವಿಶ್ವಚೇತನದ ಸ್ಪಂದನವೆ ಸೌಂದರ್ಯ; ಅದುವೆ ಜೀವನದ ಮೂಲ ಬಂಧು ಎಂಬಂತೆ ಬೊಮ್ಮನದು.[೧]

ಸೌಂದರ್ಯ ವಿಶ್ವಚೇತನದ ಸ್ಪಂದನ, ನಮ್ಮ ಜೀವನಕ್ಕೆ ಅದೇ ಮೂಲ ಸೌಂದರ್ಯದಿಂದಾಗುವ ಈ ಬಂಧರತೆ ಬೊಮ್ಮನದು ಎಂಬಂತೆ ಜ್ಞಾನೇಶ್ವರವರ ಕಲಾಕೃತಿ ಬದುಕನ್ನು ಹೊತ್ತುಕೊಂಡು ಕನ್ನಡ ನಾಡಿನ ಜನತೆಗೆ ಮತ್ತು ತಮ್ಮ ಕುಟುಂಬಕ್ಕೆ ತಮ್ಮ ಈ ಕಲೆಯ ಗುಣಾತ್ಮಕ ಅಂಶಗಳನ್ನಾದರೂ ತಿಳಿಸಿಕೊಡಬೇಕೆಂದು ಕಲಾಶಿಕ್ಷಣವನ್ನು ಪಡೆದು ಹುಬ್ಬಳ್ಳಿಯ ವಿಜಯ ಮಹಾಂತೇಶ ವಿದ್ಯಾಲಯದಿಂದ ತಮ್ಮ ಊರಿಗೆ ಮತ್ತೆ ಹಿಂದುರಿಗಿದರು. ಕಲೆಯ ಬಗ್ಗೆ ಜನರಲ್ಲಿ ಅರಿವು ಮೂಡಿಸಬೇಕೆಂಬುದು ಇವರ ಆಶೆಯಾಗಿತ್ತು ಆದರೆ ಕರ್ನಾಟಕದಲ್ಲಿ ಕಲಾಶಿಕ್ಷಣದ ಬಗ್ಗೆ ತರಬೇತಿಯನ್ನು ನೀಡುವ ಸಂಸ್ಥೆಗಳು ಇನ್ನು ಅಷ್ಟು ಗಂಭೀರವಾದ ಅಧ್ಯಯನವನ್ನು ಮೂಡಿಸುವಂತಹ ಹಾಗೂ ಮಾಹಿತಿಗಳನ್ನು ತಿಳಿಸಿಕೊಡುವ ಕೇಂದ್ರಗಳಾಗಲಿ ಕಂಡುಬರುತ್ತಿರಲಿಲ್ಲ ಕಲಾಶಿಕ್ಷಣ ಸಂಸ್ಥೆಯಿಂದಲೆ ಕಲಾಶಿಕ್ಷಣವನ್ನು ಪಡೆಯುವುದು ಅನಿವಾರ್ಯವಾಗಿತ್ತು. ಎಂದು ಜ್ಞಾನೇಶ್ವರವರು ವ್ಯಥೆಪಡುತ್ತಿದ್ದರು.

ಅನ್ಯರ ಸಂಸ್ಕಾರ ಇಲ್ಲವೇ, ರಾಷ್ಟ್ರೀಯ ಹಿತರಕ್ಷಣೆಯ ದಿಶೆಯಲ್ಲಿ ನೀತಿ ಕಲಾ–ರೂಪಣೆಗೆ ಕೈಯಿಕ್ಕುವ ಕಲಾವಿದನು, ನೀತಿಗೆ ಅತ್ಯಂತ ವ್ಯಾಪಕವಾದ ಅರ್ಥವನ್ನಿಟ್ಟುಕೊಳ್ಳಬೇಕಾಗುವುದು.[೨] ಪ್ರಾಯಶಃ ಜೀವನದಷ್ಟು ವಿಶಾಲವಾದ ಅರ್ಥವನ್ನು ಅಕ್ಕಿಟ್ಟುಕೊಳ್ಳಬೇಕೆಂದು ತೋರುತ್ತದೆ. ಮ್ಯಾಥೋ ಅರ್ನಾಲ್ಡ್ ಹೇಳುವಂತೆ ಅದನ್ನು ಜೀವಿಸುವ ಕಲೆ ಎಂದು ಹೆಸರಿಸಬಹುದು. ಸಮಗ್ರವಾದ ಜೀವನ ಕಲೆಯನ್ನು ಬೋಧಿಸುವಂತ ಗುರುಪ್ರೇರಿತವಾದ ಕಲಾ ಸಾಹಿತ್ಯಕ್ಕೆ ದೇಶ ಕಲಾ ವಿಶಿಷ್ಟಯತೆ ಹಾಗೂ ಸಂಕುಚಿತೆಗಳು ಬಾರದೆನ್ನಬಹುದು.

೧. ಡಿ.ವಿ.ಜಿ. ಮಂಕುತಿಮ್ಮನ ಕಗ್ಗ, ಪು.೧೦೬

೨. ಡಾ. ಬಿ.ಬಿ. ಹೆಂಡಿ; ಪಾಶ್ಚಮಾತ್ಯ ಕಾವ್ಯ ಮೀಮಾಂಸೆ. ಪುಟ.೮೮

ಜ್ಞಾನೇಶ್ವರ ಅವರ ಕಲಾ ಸೇವೆಗೆ ಅನೇಕರ ಗಣ್ಯರು, ಮಹಾನ್ ವ್ಯಕ್ತಿಗಳು, ದಾನಿಗಳು ನೆರವಾಗಿ ನಿಂತರು. ಇಂಥ ನೆರವು ದೊರೆಯುವದು ಸುಲಭದ ಮಾತಲ್ಲ ಎಂಬುದು ಗಮನಿಸಿ ಅವಲೋಕಿಸುವುದು ಪ್ರಮುಖವಾಗಿದೆ. ಈ ಕುರಿತಂತೆ ಅದರಲ್ಲಿರುವ ಗುಣಾತ್ಮಕ ಅಂಶಗಳೇ ಇದಕ್ಕೆ ಸಾಕ್ಷಿಯಂತಿವೆ. ಇದಕ್ಕಾಗಿ ಅವರು ಸದಾಕ್ರಿಯಾಶೀಲರಾಗಿ ಅಭಿವೃದ್ಧಿಯತ್ತ ಸ್ಮೃತಿ ಪಟಲದಲ್ಲಿ ಯೋಚಿಸುತ್ತಿದ್ದರು. ಇಂತಹ ಶಿಕ್ಷಣದ ಸೌಲಭ್ಯ ಕರ್ನಾಟಕದ ವಿದ್ಯಾರ್ಥಿಗಳಿಗೆ ಕರ್ನಾಟಕದ ಮಧ್ಯವರ್ತಿ ಸ್ಥಳದಲ್ಲಿಯೇ ಏಕೆ ಲಭಿಸಬಾರದು? ಆಗಲೇ ಮುಂಬೈ ಜೆ.ಜೆ. ಶಾಲೆಯಲ್ಲಿ ದೊರೆಯುವ ಶಿಕ್ಷಣದಂತೆ ಕರ್ನಾಟಕದ ವಿದ್ಯಾರ್ಥಿಗಳಿಗೂ, ಕಲಾಶಿಕ್ಷಣ ದೊರೆತರೆ, ಆಗ ಕರ್ನಾಟಕದ ವಿದ್ಯಾರ್ಥಿಗಳು ಸಹ ರಾಷ್ಟ್ರ-ಅಂತರಾಷ್ಟ್ರ ಮಟ್ಟದಲ್ಲಿ ಬೆಳೆಯಲು ಅನುಕೂಲವಾಗುತ್ತದೆ ಮತ್ತು ಚಿತ್ರಕಲಾ ಜೀವನ ಪ್ರವೇಶ ಬಯಸುವವರಿಗೆ ಹಾಗೂ ತರುಣ ಕಲಾಭ್ಯಾಸಕ್ತರಿಗೆ ಲಭ್ಯವಾಗಬೇಕೆಂದು. ಅವರ ಮನಸ್ಸು ತುಂಬ ಹಾತೊರೆಯುತ್ತಿತ್ತು. ಲೋಕದ ಈ ಸುಂದರವಾದ ಆವರಣದಲ್ಲಿ ಈ ಜೀವ ಜನ್ಮ ಜನ್ಮಾಂತರಗಳಿಂದಲೂ ಹರಿದುಬರುತ್ತದೆ. ಈ ಕಾರಣದಿಂದ ಲೋಕದ ವಸ್ತುಗಳಿಗೂ ಈ ಜೀವಕ್ಕೂ ಜನ್ಮ ಜನ್ಮಾಂತರ ಸಹೃದಯವಿದೆ. ಆದ್ದರಿಂದಲೇ ಸುಂದರವಾದ ಗಾನವನ್ನಾಗಿಸಿದಾಗ ಸುಂದರ ನೋಟವನ್ನು ನೋಡಿದಾಗ ನಮ್ಮಲ್ಲಿ ಒಂದು ಬಗೆಯ ತನ್ಮಯತೆ ಅಪೂರ್ವವಾದ ಬಾಂಧವ್ಯದ ಅನುಭವ ಉಂಟಾಗುತ್ತದೆ. ವಸ್ತುವೊಂದು ಸುಂದರವಾಗಿದೆ ಎಂದು ತೋರುವುದು ಅದರ ವರ್ಣದಿಂದ, ಸೌಂದರ್ಯದ ಮುಖ ಲಕ್ಷಣವಾದ ಈ ವರ್ಣ ವಿಲಾಸವನ್ನು ಕಾಳಿದಾಸ ಮತ್ತು ಬಾಣ ಇವರಿಬ್ಬರು ಗುರುತಿರುವಷ್ಟು ಉಳಿದವರಾರು ಗುರುತಿಸಿಲ್ಲವೆನ್ನಬಹುದು. ಎಂಬ ಅಭಿಪ್ರಾಗಳಯಗಳನ್ನು ಕಲಾವಿದರ ಕಲಾಕೃತಿಗಳ ಅಧ್ಯಯನದಿಂದ ತಿಳಿಯಬಹುದು.

ಇತಿಹಾಸದಂತೆಯೆ ಆದಿಮಾನವನ ಬದುಕು, ಹೋರಾಟ ಉಳಿಯುವಿಕೆಯ ಸಂಕಲ್ಪಗಳ ಅಭಿವ್ಯಕ್ತಿಯ ಮಾಧ್ಯಮವಾಗಿ ಬೆಳೆದು ಬಂದದ್ದು ಚಿತ್ರಕಲೆಯನ್ನು ಇತಿಹಾಸದೊಳಗಡೆಯಿಂದ ಕಾಲಘಟ್ಟದಲ್ಲಿ ದೇಶಿಯ ಬದುಕಿನಲ್ಲಿ ಟೀಕಿಸಿದ ನಿಬಂಧನೆಗಳ ಗಡಿಯಲ್ಲಿ ಬೆಳೆದಿರುವುದು ಸಾಹಿತ್ಯವಾಗುತ್ತದೆ. ಈ ಕಾಲಘಟ್ಟವನ್ನು ಮೀರಿ ಒಂದೆಡೆಯಲ್ಲಿ ಸಂಗಮಿಸಿರುವ ಚಿತ್ರಕಲೆ ಸಾಹಿತ್ಯದ ಜೊತೆ ಜೊತೆಯಲ್ಲಿ ಸಹಜವಾಗಿ ಬೆಳೆದುಕೊಂಡು ಬಂದಿದೆ.[೩] ಇಂದಿನ ಆಧುನಿಕ ಮಾನವನ ನಾಗರಿಕತೆ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಕಲೆ ಮತ್ತು ಸಾಹಿತ್ಯಗಳು ಬೇರೆ ಬೇರೆ ಎಂದೆನಿಸದೆ ಒಂದರೊಳಗೆ ಮತ್ತೊಂದು ಹೆಣೆದುಕೊಂಡಿರುವಂತೆ ಒಂದನ್ನೊಂದು ಅಭಿವ್ಯಕ್ತಿಗಾಗಿ ಆಶ್ರಯಿಸಿಕೊಂಡಿವೆ.

ಸ್ವರ ಮತ್ತು ಲಿಪಿ ಮಾಧ್ಯಮಗಳ ಮುಖಾಂತರ ಕಲ್ಪಿತ ಪದಗಳ ಮಿತಿಯಲ್ಲಿ ಸಾಹಿತ್ಯವು ಆಯಾ ದೇಶಿಯ ನೆಲೆಗಳಲ್ಲಿ ತನ್ನ ಆಶಯದ ಭಾವಗಳನ್ನು ಭಿತ್ತರಿಸುತ್ತಿದ್ದರೆ, ಚಿತ್ರಕಲೆಯು ದೇಶಿಯ ಮತ್ತು ಅನ್ಯದೇಶಿಯ ಸೀಮಿತ ಶಬ್ದಕೋಶಗಳ ಗಡಿಯನನ್ನು ಇತಿಹಾಸದ ಕಾಲಮಾನವನ್ನು

೩.ಶಂಕ್ರಪ್ಪ ಕುಂದಗೋಳ(ಸಂ) ಚಿತ್ರಕಲಾವಿದ, ಡಿ.ವ್ಹಿ.ಹಾಲಭಾವಿ.ಅ.ಪ್ರಕಟಿತ, ಪುಟ.೧೨೬

ದಾಟಿಕೊಂಡು ತನ್ನ ಆಶಯಗಳನ್ನು ಭಿತ್ತರಿಸಬಲ್ಲದಾಗಿದೆ. ಈ ರೀತಿಯ ಚಿತ್ರಕಲೆಯ ಅಭಿವ್ಯಕ್ತಿಗೆ ಇರುವ ಹಲವು ಮಿತಿಗಳು ಸಾಹಿತ್ಯಿಕ ಅಭಿವ್ಯಕ್ತಿಗೂ ಇವೆ ಹತ್ತು ಪ್ರವಸನಗಳ ಸಾಹಿತ್ಯಿಕ ವಿವರಗಳನ್ನು ಒಂದು ಚಿತ್ರವು ವಿವರಿಸುವಂತೆ ಎರಡು ಸಾಲುಗಳ ಸಾಹಿತ್ಯಿಕ ವಿವರಗಳನ್ನು ಒಂದು ಚಿತ್ರವು ವಿವರಿಸುವಂತೆ ಎರಡು ಸಾಲುಗಳ ಸಾಹಿತ್ಯಿಕ ಬೆಡಗನ್ನು ಒಂದು ಚಿತ್ರವು ವಿವರಿಸಲಾಗದೆ ಉಳಿಯಲೂಬಹುದು. ಆದುದರಿಂದ ಮಾನವನ ಕಲಾತ್ಮಕ ಮತ್ತು ಸಾಹಿತ್ಯಿಕ ಸಂಪರ್ಕದ ಬೆಳವಣಿಗೆಯಲ್ಲಿ ಕಲೆ ಮತ್ತು ಸಾಹಿತ್ಯಗಳು ಪರಸ್ಪರ ಕೊಡುಕೊಳ್ಳುವಿಕೆಯಿಂದ ವಿನಿಮಯಗಳು ಬೆಳೆದಂತೆ ಅವೆರಡರ ಅಂತರಸ್ಥಿತಿಯ ಅನಾವರಣವೊಂದು ನೆಲೆಗೊಳ್ಳುತ್ತದೆ.[೪] ಭಾರತೀಯ ಸಮಕಾಲೀನ ಕಲೆ ಹಾಗೂ ಕಲಾವಿದರಿಗೆ ಪ್ರಸ್ತುತ ದಿನಮಾನಗಳಲ್ಲಿ ತಾರಾಮೌಲ್ಯ ಬಂದಿದೆ. ಸುಶಿಕ್ಷಿತ ಜನರ ನಡುವೆಯಂತೂ ಚಿತ್ರಕಲಾವಿದರುಗಳಿಗೆ ಉನ್ನತ ಗೌರವ ಸ್ಥಾನಗಳು ಲಭ್ಯವಾಗಿದೆ.

ಕರ್ನಾಟಕದಲ್ಲಿ ಕನ್ನಡ ಭಾಷೆಯಲ್ಲಿ ದೃಶ್ಯಕಲಾ ಸಾಹಿತ್ಯ ಮೇಲ್ನೋಟಕ್ಕೆ ಇಲ್ಲವೆ ಇಲ್ಲ ಎನ್ನುವಂತ ಸಂದರ್ಭದಿಂದ ಇಂದು ಬಹುದೂರ ನಡೆದುಬಂದಿದ್ದೇವೆ. ಗಮನಾರ್ಹ ಸಾಹಿತ್ಯವಾಗಿರುವ ಚಿತ್ರಭಾಷೆ ಬೆಳೆಯುತ್ತಿರುವ ಸಂದರ್ಭದಲ್ಲಿ ನಾವಿದ್ದೇವೆ. ಈ ದಶಮಾನದ ಮೂರನೆಯ ದಶಕದಿಂದಿಚೆಗೆ ಪುರಾತತ್ವಶೋಧಕರ ಬರಹಗಳಿಂದಾರಂಭಿಸಿ ಕಲಾ ಇತಿಹಾಸಕಾರರ ವಿಮರ್ಶಕರು ಬರಹಗಳಲ್ಲಿಯೆ ಅಲ್ಲದೆ ಕನ್ನಡದ ದಿನಪತ್ರಿಕೆ ಮತ್ತು ವಾರಪತ್ರಿಕೆಗಳು ಸಾಹಿತ್ಯ ಹಾಗೂ ಸಾಂಸ್ಕೃತಿಕ ನಿಯತಕಾಲಿಕಗಳಲ್ಲಿಯೂ ಕಲಾಸಾಹಿತ್ಯ ಕಾಣಿಸಿಕೊಳ್ಳತೊಡಗಿತು. ಕಲಾಸಾಹಿತ್ಯಕ್ಕೆ ಗಂಭೀರ ಚಿಂತನೆಯನ್ನು ನೀಡಿರುವವರ ಕೃತಿಗಳನ್ನು ಪರಿಶೀಲಿಸಿದರೆ ೧೯೩೦ರ ನಂತರ ಕೆ. ಶಿವರಾಮಕಾರಂತ ಮತ್ತು ಅ.ನ. ಕೃಷ್ಣರಾಯರ ಪ್ರಕಟನೆಗಳು ಕಲಾಸಾಹಿತ್ಯ ಒಳಗೊಳ್ಳಲಾರಂಭಿಸಿದ್ದು ಒಂದು ವಿಶೇಷ ಕೊಡುಗೆಯಾಗಿದೆ. ಶಿವರಾಮ್ ಕಾರಂತರ ಭಾರತೀಯ ಚಿತ್ರಕಲೆ, ಕಲಾಪ್ರಪಂಚ, ಕಲೆಯದರ್ಶನ, ಭಾರತೀಯ ಶಿಲ್ಪ, ಕರ್ನಾಟಕದಲ್ಲಿ ಚಿತ್ರಕಲೆ, ಶಿಲ್ಪಿಕಲೆ, ವಾಸ್ತುಕಲೆಗಳು ಮತ್ತು ಅ.ನ.ಕೃರವರ ವಿವಾದಾಸ್ಪದ ಭಾರತೀಯ ಚಿತ್ರಕಲೆಯಲ್ಲಿ ರಾಜಾ ರವೀವರ್ಮನ ಸ್ಥಾನ ಇತ್ಯಾದಿಗಳು ಗಮನಾರ್ಹ.

ಹೀಗೆ ತನ್ನ ಎಪ್ಪತ್ತು ವರ್ಷಗಳ ಚರಿತ್ರೆಯಲ್ಲಿ ಹಲವಾರು ಘಟ್ಟಗಳನ್ನು ಮೆಟ್ಟಿ ಬೆಳೆದು ಬಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಕಲಾವಿದರಾಗಿ, ಕಲಾಸಕ್ತರಾಗಿ, ಶಿಲ್ಪ ಚಿತ್ರ ಕಲಾವಿದರಾಗಿ ಬದುಕಿನಲ್ಲಿ ಮತ್ತು ಕಲಾಕ್ಷೇತ್ರದಲ್ಲಿ ಜ್ಞಾನೇಶ್ವರ ಅವರು ಒಂದು ವಿಶಿಷ್ಟ ಪರಂಪರೆಯ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಅಲ್ಲದೇ ನಮ್ಮ ಕಲಾಕ್ಷೇತ್ರ ಕಂಡುಕೊಂಡ ಒಬ್ಬ ಪ್ರತಿಭಾನ್ವಿತ ಪ್ರಯೋಗಶೀಲ ಕಲಾವಿದ ಇವರು ದೃಶ್ಯಕಲೆ ಮತ್ತು ಕಲಾ ಸಾಹಿತ್ಯ ಸ್ವಲ್ಪಮಟ್ಟಕ್ಕೆ ತಿಳಿದವರು. ಈ ಎರಡು ದೃಷ್ಟಿಯಿಂದ ತಮ್ಮನ್ನು ತೊಡಗಿಸಿಕೊಂಡವರು ಜ್ಞಾನೇಶ್ವರ ಅವರು. ಸಮಕಾಲೀನತೆಯಲ್ಲಿ ಕಲಾಕ್ಷೇತ್ರದಲ್ಲಿ ಎಲ್ಲ ದೃಷ್ಟಿಯಿಂದಲೂ ಹೊಸತನಕ್ಕೆ ಹಂಬಲಿಸುತ್ತಿದ್ದಂತೆ ಕೆಲವು ಮಹತ್ವಪೂರ್ಣವಾದ

೪. ಶಂಕ್ರಪ್ಪ ಕುಂದಗೋಳ(ಸಂ) ಚಿತ್ರಕಲಾವಿದ, ಡಿ.ವ್ಹಿ.ಹಾಲಭಾವಿ.ಅ.ಪ್ರಕಟಿತ, ಪುಟ.೧೨೭

ಬದಲಾವಣೆಗೆ ಹಾತೊರೆಯುತ್ತಿದ್ದರು. ಇವರ ಬಹುಮುಖ ವ್ಯಕ್ತಿತ್ವದ ಒಂದು ಭಾಗವಾಗಿ ಚಿತ್ರಕಲೆ ಮತ್ತು ಶಿಲ್ಪಕಲೆಯನ್ನು ಇಲ್ಲಿ ಅಧ್ಯಯನ ನಡೆಸಲಾಗಿದೆ.

ಜ್ಞಾನೇಶ್ವರವರ ಅವರ ಚಿತ್ರಕಲೆ ಮತ್ತು ಶಿಲ್ಪಕಲೆಯನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ವಿಭಾಗಿಸಿಕೊಂಡು ಅಧ್ಯಯನ ಮಾಡಬಹುದಾಗಿದೆ.

ಮೌನಿಗಳು ಮಿತಭಾಷಿತರು, ಹೆಚ್ಚು ಒಡನಾಟ ಬಯಸದ ಜ್ಞಾನೇಶ್ವರ ಅವರ ಚಿಕ್ಕಂದಿನಿಂದ ಓದಿನಲ್ಲೂ ಚಿತ್ರಕಲೆಯಲ್ಲೂ ಮಣ್ಣಿನ ಮತ್ತು ಕಲ್ಲಿನ ಮಾದರಿ ಶಿಲ್ಪಗಳನ್ನು ಸಹ ಮಾಡುತ್ತಿದ್ದರು. ಜ್ಞಾನೇಶ್ವರ ಅವರ ಮನೆಯಲ್ಲಿ ಬಡತನವಿದ್ದರು ಅವರ ಓದಿನ ಬಗೆಯಲ್ಲಿ ಎಂದು ಬಡತನ ಅಡ್ಡಿಯಾಗಲಿಲ್ಲ. ಓದಿನ ಜೊತೆಗೆ ಜ್ಞಾನೇಶ್ವರ ಅವರು ವಂಶದ ವೃತ್ತಿ ಹಾಗೂ ಪರಂಪರೆಯಾಗಿ ಬೆಳೆದು ಬಂದ ಶಿಲ್ಪ ರಚನೆ ಮತ್ತು ಚಿತ್ರರಚನೆಯನ್ನು ಮಾಡಿಕೊಂಡು ಕಲಾಕ್ಷೇತ್ರದಲ್ಲಿ ಬೆಳೆಯಬೇಕು ಎಂಬುದು ಮತ್ತು ಆ ಕಲಾ ಜಗತ್ತಿನಲ್ಲಿ ಅವನು ಒಬ್ಬ ಕಲಾವಿದ ಎಂಬುದನ್ನು ಗುರುತಿಸಿಕೊಳ್ಳಬೇಕು ಎಂಬುದು ಜ್ಞಾನೇಶ್ವರ ಅವರು ಆಸೆಯಾಗಿತ್ತು.

ಜ್ಞಾನೇಶ್ವರವರು ಶಿಲ್ಪರಚನೆಯಲ್ಲಿ ತೊಡಗುವಮುನ್ನ ಶ್ಲೋಕವನ್ನು ಸ್ಮರಿಸುತ್ತಾ ಶಿಲ್ಪರಚನೆಗೆ ಸಿದ್ಧವಾಗುತ್ತಿದ್ದರು. ಅದರ ಮುಂದೆ ತಾವು ಕಲ್ಲಾಗಿಯೇ ಕುಳಿತಿರುತ್ತಿದ್ದರು. ಅಷ್ಟು ತಾಳ್ಮೆ, ಭಕ್ತಿಯಿಂದ ಶಿಲ್ಪರಚನೆ ಮಾಡುತ್ತಿದ್ದರು. ಇದು ಅವರ ಕಲಾ ವಿಧಾನವಾಗಿತ್ತು. ಇದೇ ರೀತಿಯಾಗಿ ತಮ್ಮ ಬದುಕಿನಲ್ಲಿ ಪ್ರವೇಶವಾಗಿದ್ದು ಪ್ರಶಸ್ತಿಗಳು ಮತ್ತು ಗೌರವ. ಇದರ ನಡುವೆ ಅವರನ್ನು ಅರಸಿ ರಾಜ್ಯ ಸರ್ಕಾರ ಅವರ ಕಲಾ ಸಾಧನೆಗೆ ಮೆಚ್ಚಿ ಶಿಲ್ಪಕಲಾ ಆಕಾಡೆಮಿಯ ನೂತನ ಸದಸ್ಯರಾಗಿ ೨೦೦೫ರಲ್ಲಿ ಆಯ್ಕೆಮಾಡಿದರು. ಜ್ಞಾನೇಶ್ವರ ಅವರು ಅಕಾಡೆಮಿಯ ಸದಸ್ಯರಾದ ನಂತರ ಶಿಲ್ಪಕಲೆಯ ಬಗ್ಗೆ ಕಾರ್ಯಾಗಾರವನ್ನು ಮಾಡಿಸುತ್ತಿದ್ದರು. ಅದೇ ರೀತಿಯಾಗಿ ೪೯ನೇ ಸಾಹಿತ್ಯ ಸಮ್ಮೇಳನದಲ್ಲಿ ಜಗತ್ ವಿಖ್ಯಾತ ಜೋಗ ಜಲಪಾತದ ಸೌಂದರ್ಯವನ್ನು ತಮ್ಮ ಕಲಾಕೃತಿಯಲ್ಲಿ ರಚಿಸಿದರು. ಹಾಗೆ ಅದೆ ಸಮ್ಮೇಳನದಲ್ಲಿ ಆನವಟ್ಟಿಯ ದೇವಾಲಯದ ಸೊಬಗನ್ನು ಮತ್ತು ಮಲೆನಾಡಿನ ಜನಪದ ಸಂಸ್ಕೃತಿಯಲ್ಲಿ ಬಿಂಬಿಸುವ ಡೊಳ್ಳುಕುಣಿತ, ಕೋಲಾಟ, ಯಕ್ಷಗಾನ ಇನ್ನಿತರ ಮಲೆನಾಡಿನ ಸೌಂಧರ್ಯ ಸಂಸ್ಕೃತಿ ಕಾಪಾಡುವ ನೃತ್ಯ ಚಿತ್ರಗಳನ್ನು ಇವರು ಅಲ್ಲಿ ರಚಿಸಿದರು. ಸಮ್ಮೇಳನ ಯಶಸ್ವಿಯಿಂದ ನಡೆಯಿತು. ಜ್ಞಾನೇಶ್ವರ ಅವರು ಜನ ಮೆಚ್ಚುಗೆಯನ್ನು ಗಳಿಸಿದರು. ಸಮ್ಮೇಳನದಲ್ಲಿ ನೆರೆದಿರುವ ಗಣ್ಯರು ಇವರ ಕಲಾಕೃತಿಗಳನ್ನು ನೋಡಿ ಆ ಕಲಾಕೃತಿಗಳಿಗೆ ಮಾರುಹೋದರು. ಈ ರೀತಿ ಹಂತವಾಗಿ ಕಲಾ ಚಟುವಟಿಕೆಯಲ್ಲಿ ಎಂದಿಗೂ ಪಾಲ್ಗೊಳುವ ಉತ್ಸಾಹ ಜ್ಞಾನೇಶ್ವರವರದು ಆಗಿತ್ತು.

ಅದೇ ರೀತಿ ಶಿವಮೊಗ್ಗೆಯಲ್ಲಿ ಇವರು ಕಲಾ ಮಹಾವಿದ್ಯಾಲಯವಾದ ಶ್ರೀ ಜಗದ್ಗುರು ಪಂಚಾಚಾರ್ಯ ವಿದ್ಯಾಲಯದಲ್ಲಿ ನಡೆದ ಕಲಾಪ್ರದರ್ಶನಕ್ಕೆ ಉದ್ಘಾಟನೆಯನ್ನು ಜ್ಞಾನೇಶ್ವರವರು ಮಾಡಿದರು. ಈ ರೀತಿಯ ಕಲಾಪ್ರದರ್ಶನದಲ್ಲಿ ಜ್ಞಾನೇಶ್ವರ ಅವರು ತಪ್ಪದೆ ತಾವು ಭಾಗಿಯಾಗುತ್ತಾ

ನಂತರದ ದಿನಗಳಲ್ಲಿ ಶಿವಮೊಗ್ಗದಲ್ಲಿ ಒಂದು ಕಲಾಶಾಲೆಯನ್ನು ತೆರೆಯಬೇಕೆಂಬುದು ಜ್ಞಾನೇಶ್ವರ ಅವರ ಆಸೆಯಾಗಿತ್ತು. ಅದರ ಕೆಲಸಗಳು ಕಾರಣಾಂತರಗಳಿಂದ ಮುಂದೂಡಲಾಗಿದೆ.

**ಜ್ಞಾನೇಶ್ವರ ಅವರು ಭಾಗವಹಿಸಿದ ಕಲಾ ಪ್ರದರ್ಶನಗಳು**

ಶಿವಮೊಗ್ಗದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮೊದಲಿಗೆ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿದರು. ಚಿತ್ರಕಲೆ ಮತ್ತು ಶಿಲ್ಪಕಲಾಕೃತಿಗಳನ್ನು ಎರಡನ್ನು ಪ್ರದರ್ಶಿಸಲಾಯಿತು. ಶಿವಮೊಗ್ಗದ ಜನರು ನಮ್ಮ ಮಧ್ಯ ಇಂತಹ ಒಬ್ಬ ಕಲಾವಿದ ಇದ್ದಾರೆಯೇ ಎಂಬುದನ್ನು ಅಂದಿನ ಜನ ತಿಳಿದರು. ಮೇಲಾಗಿ ಶ್ರೀ ಎಸ್.ವಿ. ರಂಗಣ್ಣರವರಿಂದ ಕಲಾಪ್ರದರ್ಶನದ ಉದ್ಘಾಟನೆಯಾಯಿತು. ರಂಗಣ್ಣನವರಂರು ಜ್ಞಾನೇಶ್ವರವರ ಕಲಾಕೃತಿಗಳನ್ನು ಕುರಿತು ಮಾತನಾಡಿದರು ಮತ್ತು ಇಂತಹ ಕಲಾವಿದ ನಮ್ಮ ಜೊತೆಯಲ್ಲಿ ಇರುವುದು ಹಾಗೂ ಈ ಜಿಲ್ಲೆಯಲ್ಲಿ ಈ ರೀತಿಯ ಕಲಾವಿದರಿರುವುದು ಜಿಲ್ಲೆಯ ಭಾಗ್ಯ ಎಂದು ಜ್ಞಾನೇಶ್ವರಅವರನ್ನು ಗೌರವ ಮಾತುಗಳಿಂದ ಸನ್ಮಾನಿಸಿದರು. ನಂತರದ ದಿನಗಳಲ್ಲಿ ೧೯೮೮ರಲ್ಲಿ ಸಹ್ಯಾದ್ರಿ ದೃಶ್ಯಕಲಾ ಸಂಸ್ಥೆ ಸ್ಥಾಪಿಸಿದಾಗ ಕಲಾ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ಅದು ಜ್ಞಾನೇಶ್ವರ ಅವರ ಕಲಾಕೃತಿಗಳನ್ನು ಮೆಚ್ಚಿ ಸಹ್ಯಾದ್ರಿ ದೃಶ್ಯಕಲಾ ಸಂಸ್ಥೆಯವರು ಪ್ರದರ್ಶನವನ್ನು ಏರ್ಪಡಿಸಿದರು. ಅದರ ಅಧ್ಯಕ್ಷತೆಯನ್ನು ಟಿ.ವಿ ಸತ್ಯನಾರಾಯಣ ವಹಿಸಿದ್ದರು. ಅತಿಥಿಗಳಾಗಿ ಆರ್.ಎಂ. ಹದಪದ ಅವರು ಇದ್ದರು. ನಗರದ ಕಲಾವಿದರಾದ ಪುಟ್ಟಣ ಎಸ.ಆರ್, ವೆಂಕಟೇಶ, ಜಿ.ಎಂ. ಹೆಗ್ಗಡೆ, ಗರಗ ರಾಜಶೇಖರ, ರಾಮಧ್ಯಾನಿ ಉಪಸ್ಥಿತರಾಗಿದ್ದರು. ಅಲ್ಲಿಯು ಜ್ಞಾನೇಶ್ವರವರ ಕಲಾಕೃತಿಗಳು ಯಶಸ್ವಿಯಿಂದ ಪ್ರದರ್ಶನಗೊಂಡಿದ್ದವು. ಜ್ಞಾನೇಶ್ವರ ಅವರ ಕಲಾಕೃತಿಗಳನ್ನು ಜನರು ತುಂಬಾ ಆಸಕ್ತಿಯಿಂದ ವಿಕ್ಷಿಸಿದರು. ಸಹೃದಯನ ಮನಸೆಳೆಯುವ ಕಲಾಕೃತಿಗಳು ಅವು ಆಗಿದ್ದವು.

ಅದೇ ರೀತಿಯಾಗಿ ಶಿವಮೊಗ್ಗದಲ್ಲಿ ೧೯೭೬ ರಲ್ಲಿ ನಡೆದ ೪೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ಸನ್ಮಾನ್ಯ ಶ್ರೀ ಡಿ. ದೇವರಾಜ್ ಅರಸ್ ಅವರಿಂದ ಜ್ಞಾನೇಶ್ವರ ಅವರಿಗೆ ಸನ್ಮಾನ ನಡೆಯಿತು. ಆ ಜಿಲ್ಲೆಯ ಪ್ರಮುಖ ಮತ್ತು ಅಭಿಜಾತ ಕಲಾವಿದರಾದ ಜ್ಞಾನೇಶ್ವರವರನ್ನು ಅಭಿನಂದಿಸಿದರು. ಹಾಗೆ ೨೦೦೫ ಕರ್ನಾಟಕದ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ಟಿ.ಎನ್. ಚರ್ತುವೇದಿ ಅವರಿಂದ 'ಕಲಾ ಕೋವಿದ' ಎಂಬ ಬಿರುದಿನೊಂದಿಗೆ ಸನ್ಮಾನಿಸಲ್ಪಟ್ಟರು.

ನಂತರದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ೨೦೦೮ ಮತ್ತು ೨೦೦೯ರ ಗೌರವ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ವಾರ್ಷಿಕ ಶಿಲ್ಪ ಕಲಾ ಪ್ರದರ್ಶನದಲ್ಲಿ 'ಜೀವನ್ಮಾನ ಸಾಧಕ' ಪ್ರಶಸ್ತಿಯೊಂದಿಗೆ ಗೌರವಿಸಿದರು. 'ಹಸಿವು' ಎಂಬ ಶೀರ್ಷಿಕೆಯನ್ನಿಟ್ಟು ತಾಯಿ ಮಗುವಿನ ಶಿಲ್ಪವನ್ನು ಮಣ್ಣಿನ ಟೆರಾಕೋಟ ಮಾಧ್ಯಮದಲ್ಲಿ ರಚಿಸಿ ಶಿವಮೊಗ್ಗದಲ್ಲಿ ಪ್ರದರ್ಶಿಸಿದಾಗ ಅದನ್ನು ಇಂಗ್ಲೀಷ್ ವಾರಪತ್ರಿಕೆಯ ಮುಖಪುಟದಲ್ಲಿ ಈ ಶಿಲ್ಪವು ಜನ ಮನ್ನಣೆ ಪಡೆಯಿತು. ಇದರಿಂದ ಜ್ಞಾನೇಶ್ವರ ಅವರು ತುಂಬಾ ಸಂತೋಷಪಟ್ಟರು.

**ಕರ್ನಾಟಕ ಶಿಲ್ಪಕಲಾ ಆಕಾಡೆಮಿಯ ಸದಸ್ಯರಾಗಿ ಜ್ಞಾನೇಶ್ವರ ಅವರ ಚಟುವಟಿಕೆಗಳು**

೨೦೦೫ರ ಅವಧಿಯಲ್ಲಿ ಕೆ. ಜ್ಞಾನೇಶ್ವರ ಅವರು ಕರ್ನಾಟಕ ಶಿಲ್ಪಕಲಾ ಆಕಡೆಮಿಯ ಸದಸ್ಯರಾಗಿದ್ದರು. ಆಗ ಅವರು ಮಾಡಿದ ಮಹತ್ವಯುತವಾದ ಕಲಾಚಟುವಟಿಕೆಗಳು ಇಂದಿಗೂ ಸ್ಮರಣೀಯ, ಜನಸಾಮಾನ್ಯರ ಬಳಿಗೆ ಕಲೆಯನ್ನು ತೆಗೆದುಕೊಂಡು ಹೋಗುವುದು ಅಂದಿನ ಚಟುವಟಿಕೆಗಳಲ್ಲಿ ಪ್ರಮುಖವಾದದ್ದು. ಅದರಲ್ಲಿ ಸಮೂಹ ಶಿಲ್ಪ ಪ್ರಮುಖವಾದುದು. ಜ್ಞಾನೇಶ್ವರ ಅವರ ಅವಧಿಯಲ್ಲಿನ ಕಾರ್ಯಚಟುವಟಿಕೆಯನ್ನು ಅಕಾಡೆಮಿಯ ಕಲಾವಾರ್ತೆಯಿಂದ ಆಯ್ದುಕೊಂಡು ಇಲ್ಲಿ ದಾಖಲಿಸಲಾಗಿದೆ.

ಪ್ರಸ್ತುತ ಅವಧಿಯಲ್ಲಿ ಅಕಾಡೆಮಿ ರೂಪಿಸಿದ ಇನ್ನೊಂದು ವಿನೂತನ ಯೋಜನೆಯೆಂದರೆ ಕಲೆಯ ಬಗೆಗಿನ ವಿಶೇಷ ಉಪನ್ಯಾಸಮಾಲೆ. ಕಲೆ ಸಮಾಜದ ಎಲ್ಲ ಸ್ಥಳದವರಿಗೂ ಮುಟ್ಟಬೇಕು ಜನ ಸಾಮಾನ್ಯರಂತೆ ಬುದ್ದಿ ಜೀವಿಗಳಲ್ಲೂ ದೃಶ್ಯಕಲಾ ಕ್ಷೇತ್ರದ ಬಗ್ಗೆ ಆಸಕ್ತಿ, ಅಭಿರುಚಿ ಮೂಡುವಂತಾಗಬೇಕು ಎಂದು ಕಲಾ ವಿಮರ್ಶಕರನ್ನು ಕರೆಸಿ ಉಪನ್ಯಾಸವನ್ನು ಪ್ರತ್ಯೇಕವಾಗಿ ಮಾಡಿದರು. ಅಕಾಡೆಮಿಯ ಸದಸ್ಯರೆಲ್ಲರ ಕಲಾಶಿಬಿರದಲ್ಲಿ ರಾಷ್ಟ್ರೀಯ, ಅಂತರಾಷ್ಟ್ರೀಯ ಪ್ರಸಿದ್ಧರಾದ ಕಲಾವಿದರ ಕಲಾಕೃತಿಗಳ ರಚನಾ ವಿಧಾನಗಳ, ಕಲಾದೃಷ್ಟಿ, ಕಲಾಸಂಬಂಧಿತ ವಿಷಯಗಳ ಆತ್ಮೀಯ ಸಂವಾದಕ್ಕೆ ಅವಕಾಶ ಒದಗಿಸುವ ದೃಷ್ಟಿಯಿಂದ ಜ್ಞಾನೇಶ್ವರ ಅವರು ಈ ಹೊಸ ಅನುಭವಗಳನ್ನು ತಾವು ಅಕಾಡೆಮಿಯ ಸದಸ್ಯರಾದ ಮೇಲೆ ಅವರ ಪಾಲಿಗೆ ಒದಗಿದೆ ಎನ್ನುತ್ತಾರೆ.

ಜ್ಞಾನೇಶ್ವರ ಅವರ ಪ್ರಗತಿದಾಯಕ ವಿಚಾರಗಳು ಅವರ ಜೊತೆಯಾಗಿಯೇ ಬೆಳೆದು ಪ್ರಕಟಗೊಂಡವು. ಅವರು ಕಲಾಕೃತಿ ರಚನೆಗೆ ಎಷ್ಟು ಪ್ರಾಧಾನ್ಯತೆ ನೀಡಿದ್ದರೂ ಅಷ್ಟೇ ಪ್ರಾಧಾನ್ಯತೆಯನ್ನು ಸ್ವಲ್ಪಮಟ್ಟಿಗೆ ಕಲಾಸಾಹಿತ್ಯಕ್ಕೂ ನೀಡಿದ್ದರು. ಜ್ಞಾನೇಶ್ವರ ಅವರು ತಮ್ಮ ಪ್ರಯೋಗಶೀಲ ಅಭಿವ್ಯಕ್ತಿ ಮಾಧ್ಯಮವೇ ಶಿಲ್ಪ ಆಕಾಡೆಮಿಯಂತಹ ಸಾಂಸ್ಕೃತಿಕ ಸಂಸ್ಥೆಯೊಂದರ ಮೂಲಕ ಕಲೆಯನ್ನು ಜನಪರಗೊಳಿಸುವ ಆಕಾಡೆಮಿಯ ಚಟುವಟಿಕೆಯಲ್ಲಿ ಇತರ ಕ್ಷೇತ್ರಗಳ ತಜ್ಞರ ಭಾಗವಹಿಸುವ ಸುವರ್ಣಾವಕಾಶವನ್ನು ಕಲ್ಪಿಸಿದ ಒಬ್ಬ ವ್ಯಕ್ತಿಯಾಗಿ, ಶಕ್ತಿಯಾಗಿ ನಮ್ಮ ನಡುವೆ ಉಳಿಯುತ್ತಾರೆ. ಅನೇಕ ಕಲಾಶಿಬಿರಗಳಲ್ಲಿ ಪ್ರದರ್ಶನಗಳಲ್ಲಿ ಪಾಲ್ಗೊಂಡಿದ್ದಾರೆ.

ಕೆ. ಜ್ಞಾನೇಶ್ವರ ಅವರ ಮಾತುಗಳಲ್ಲಿ ಕರ್ನಾಟಕ ಕಲಾಕ್ಷೇತ್ರದ ಬಗೆಗೆ ಇರುವ ಕಳಕಳಿಯನ್ನು ಕೃತಿಯ ಮೂಲಕ ನಾವು ಇಂದು ನೋಡಬಹುದಾಗಿದೆ. ಇಂದಿಗೂ ಅವರ ಕಲಾ ಚಟುವಟಿಕೆಗಳು ಮತ್ತು ಇತರೆ ಅವರ ಶಿಲ್ಪ ಕೆತ್ತನೆ ಎರಡರಲ್ಲೂ ನಮ್ಮವರು ಸ್ಮರಿಸುವ ಮತ್ತು ಜೀವಂತವಾಗಿರಿಸಿಕೊಳ್ಳುವ ದೊಡ್ಡ ಗುಣವನ್ನು ಬೆಳೆಸಿಕೊಳ್ಳಬೇಕಷ್ಟೆ ಎಂದು ಹೇಳುತ್ತಾರೆ. ಜ್ಞಾನೇಶ್ವರ ಅವರು ಬಾಲ್ಯದಿಂದಲೇ ಕಲಾಚಟುವಟಿಕೆಯಲ್ಲಿ ತೊಡಗಿರುವುದನ್ನು ಈ ಅಧ್ಯಯನದಲ್ಲಿ ಸಮಗ್ರವಾಗಿ ವಿಮರ್ಶೆ ಮಾಡಲಾಗಿದೆ. ಸದಾ ಜ್ಞಾನೇಶ್ವರವರು ಹೊಸ ರೀತಿಯ ಕಲಾ ಚಟುವಟಿಕೆಯಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡು ತಮ್ಮದೇ ಕಲಾ ಸೃಷ್ಟಿಯನ್ನು ಮಾಡುವ ಹಾಗೂ ಕ್ರಿಯಾತ್ಮಕ,

ಹೊಸ ತಂತ್ರಗಾರಿಕೆ, ಶೈಲಿಯನ್ನು ಬಳಸಿಕೊಂಡ ಕಲಾ ಕ್ಷೇತ್ರದಲ್ಲಿ ಮಹಾನ್ ಕಲಾವಿದರಾಗಿ ಬೆಳೆದು ನಿಂತಿರುವುದನ್ನು ಕಲಾಭಿಮಾನಿಗಳು ಗಮನಿಸಬಹುದು. ಇದೇ ರೀತಿಯಾಗಿ ಕಲಾ ಪ್ರಪಂಚದಲ್ಲಿ ಹೆಚ್ಚಿನ ಪ್ರಮಾಣ ಬೆಳಸಿ ತಮ್ಮ ಕಲೆಯ ಒಂದು ತೃಪ್ತಿಯೆನ್ನುವ ಗುರಿಯನ್ನು ತಲುಪುವ ಆಸೆ ಜ್ಞಾನೇಶ್ವರ ಅವರದು. ಸರಕಾರದ ನೆರವು ಸಿಕ್ಕರೆ ಬೇರೆ ಮಾತಿಲ್ಲ. ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳೆಯುತ್ತಾರೆ. ಈಗ ಪ್ರಸ್ತುತ ಕಾರ್ಯದಲ್ಲಿ ತೊಡಗಿರುವುದನ್ನು ನಾವು ನೋಡಬಹುದು.

* * *

# ಸಮಾರೋಪ

ದಕ್ಷಿಣ ಕರ್ನಾಟಕದ ಪ್ರಾಂತ್ಯದಲ್ಲಿ ಹುಟ್ಟಿಬೆಳೆದ ಕೆ. ಜ್ಞಾನೇಶ್ವರವರು ಇಂದು ನಮ್ಮ ನಡುವಿನ ಮಹತ್ವದ ಕಲಾವಿದರಾಗಿ ಈಗಲೂ ಇದ್ದಾರೆ. ಬಾಲ್ಯದಿಂದ ಮಲೆನಾಡಿನ ಹಸಿರು ಗಿಡಮರಗಳು ನಮ್ಮ ಸಂಸ್ಕೃತಿಯನ್ನು ಬಿಂಬಿಸುವ ಅಲ್ಲಿಯ ದೇವಾಲಯಗಳು ಜ್ಞಾನೇಶ್ವರ ಅವರ ಮೇಲೆ ಬೀರಿದ ಪ್ರಭಾವಗಳಿಂದ ಜ್ಞಾನೇಶ್ವರವರಿಗೆ ಶಿವಮೊಗ್ಗವೇ ಕಲೆಯ ಮೊದಲ ಪಾಠಶಾಲೆಯಾದದ್ದು. ನಂತರದಲ್ಲಿ ಅವರು ತಮ್ಮ ಮುತ್ತಾತ ತಿಪ್ಪಾಜಿ ಮತ್ತು ತಾತ ಪರಶುರಾಮಪ್ಪ ತಂದೆ ಕೃಷ್ಣಾಜಿಯವರ ಮಧ್ಯೆಯೇ ಕಲೆಯ ಹೆಚ್ಚಿನ ತಿರಳನ್ನು ತಿಳಿದರು. ಅವರ ಮನೆಯ ಎಲ್ಲ ಸದಸ್ಯರು ಕಲಾವಿದರಾಗಿದ್ದರಿಂದ ಜ್ಞಾನೇಶ್ವರವರಿಗೆ ಕಲೆಯು ಸುಲಭವಾಗಿ ತಮ್ಮದಾಗಿಸಿಕೊಂಡರು. ನಂತರ ಕಲೆಯ ಹೆಚ್ಚಿನ ತಿಳುವಳಿಕೆಗೆ ಹುಬ್ಬಳ್ಳಿಯ ವಿಜಯಮಹಾಂತೇಶ ಕಲಾವಿದ್ಯಾಲಯಕ್ಕೆ ಹೋದರು. ಬಿ.ಎಸ್.ಸಿ. ಜೊತೆಗೆ ಬಿ.ಎಫ್.ಎ. ಯನ್ನು ಒಟ್ಟಿಗೆ ಮಾಡಿದರು. ಈ ಅನುಕೂಲ ಹೇಗೆ ಆಯಿತು ಎಂದರೆ, ಜ್ಞಾನೇಶ್ವರವರಿಗೆ ಬಿ.ಎಸ್.ಸಿ. ಹುಬ್ಬಳ್ಳಿಯ ಜಾಬಿನ್ ಕಾಲೇಜಿನಲ್ಲಿ ಮಾಡಲು ಅವಕಾಶವಾಯಿತು. ಇದರ ಜೊತೆಗೆ ಬಿ.ಎಫ್.ಎ. ಸಹ ಕಲಿಯಲು ಜ್ಞಾನೇಶ್ವರವರಿಗೆ ಅನುಕೂಲವಾಯಿತು. ವ್ಯಕ್ತಿಯೊಬ್ಬನ ಬದುಕು ಅರಳುವುದು ಸಮಾಜದ ಮಧ್ಯವೇ ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ, ಮತ, ಪ್ರಧಾನವಾಗಿ ಕೆಳಸ್ತರದ ಮಕ್ಕಳ ಸೃಜನಶೀಲ ಪ್ರತಿಭೆಯನ್ನು ಗುರುತಿಸುವಲ್ಲಿ ಇಂದಿಗೂ ನಾವು ಹಿಂದಿದ್ದೇವೆ. ಗುಣಾತ್ಮಕ ಶಿಕ್ಷಣ ಮೇಲ್ವರ್ಗದ ಜನರಿಗೆ ಮಾತ್ರ ದೊರಕುತಿದ್ದು, ಕೆಳವರ್ಗದ ಜನರಿಗೆ ಅದು ಮರೀಚಿಕೆಯಾಗಿದೆ. ಕಾರಣಗಳು ಹಲವಾರು ಇದ್ದು ಅದರಲ್ಲಿ ಪ್ರಮುಖವಾಗಿ ಕಾಣಿಸಿಕೊಳ್ಳುವುದು ಆರ್ಥಿಕ ಮುಗ್ಗಟ್ಟು ಕೆಳಮಟ್ಟದಲ್ಲೇ ಇರುತ್ತದೆ. ಜೊತೆಗೆ ಕೀಳರಿಮೆ ಕೂಡ ಈ ಕಾರಣದಿಂದ ಅವರಲ್ಲಿ ಅಶಿಸ್ತು ಜೊತೆಗೆ ಶಿಕ್ಷಣವಂಚಿತರಾಗಿ ಬದುಕಿನುದ್ದಕ್ಕೂ ಕೆಳಮಟ್ಟದ ಜೀವನ ನಡೆಸಬೇಕಾದ ಅನಿವಾರ್ಯತೆ ಇದೆ. ಜ್ಞಾನೇಶ್ವರವರು ಕೂಡ ಇದಕ್ಕಿಂತ ಭಿನ್ನವಾಗಿಲ್ಲ. ಬಾಲ್ಯದಿಂದಲೂ ಸಮಾಜದ ಪ್ರವಾಹದಲ್ಲಿ ಈಜಾಡಿ ಈಗ ಮೂವತ್ತು ವರ್ಷಗಳಿಂದ ಉನ್ನತ ಸ್ಥಾನ ಮಾನಗಳನ್ನು ಪಡೆದು ದಡಸೇರದವರು. ಇದಕ್ಕೆ ಅವರ ಆತ್ಮವಿಶ್ವಾಸ ಮತ್ತು ಶ್ರಮ, ಸುಸಂಸ್ಕೃತಿಯ ಬದುಕು ಮುಖ್ಯ ಕಾರಣವೆನ್ನಬಹುದು.

ಕನ್ನಡದ ನೆಲದಲ್ಲಿ ಆಗಿಹೋದ ಕಲಾವಿದರೂ ಸಾವಿರಾರು ಜನ. ಅದರಲ್ಲಿ ಚಿರಸ್ಥಾಯಿಯಾದವರು ಕೆಲವು ಜನ. ಅವರಲ್ಲಿ ಜ್ಞಾನೇಶ್ವರವರು ಕೂಡ ಒಬ್ಬರು. ಕೆ. ಜ್ಞಾನೇಶ್ವರವರು ಕೇವಲ ಒಬ್ಬ ವ್ಯಕ್ತಿಯಾಗಿ ಗೋಚರವಾಗಿಲ್ಲ. ಶಕ್ತಿಯಾಗಿ ಗೋಚರವಾದದ್ದು, ಅವರ ಸೃಜನಶೀಲತೆಯಲ್ಲಿ ಅವರ ಚಾತುರ್ಯ ಕಲೆಯ ಗ್ರಂಥಗಾಳಿ ಇಲ್ಲದ ಸ್ವಾಂತತ್ರೋತ್ತರ ಕಾಲದ ಕಲೆಯ ಹುಟ್ಟು ಹಾಕಿದ ಕಲೆ. ಇನ್ನೊಂದು ಕನ್ನಡದ ನೆಲದ ಕಲಾವಿದರು ಎಷ್ಟೇ ಪ್ರತಿಭಾವಂತರಾಗಿದ್ದರೂ ಕೂಡ ಅವರನ್ನು ಚಿರಸ್ಥಾಯಿಯನ್ನಾಗಿಸುವ ಕಾರ್ಯ ಕನ್ನಡಿಗರಿಂದ ಆಗಿಲ್ಲವೆಂದು ದಿಟ್ಟತನದಿಂದ ಹೇಳಬಹುದು. ಹಿಂದಿನ ಶತಮಾನದ ಸುಮಾರು ೭೦ರ ದಶಕದಲ್ಲಿ ಕಲಾವಿದರ ಕುರಿತು ಪರಿಚಯಾತ್ಮಕ ಗ್ರಂಥಗಳನ್ನು ಲಲಿತ ಕಲಾ ಅಕಾಡೆಮಿ ಪ್ರಕಟಿಸಿದ್ದೇ ಅದ್ಭುತ ಸಾಧನೆಯಾಯಿತು. ಪಾಶ್ಚಾತ್ಯರಲ್ಲಿಯಂತೆ ಸಮಗ್ರವಾಗಿ ಕಲಾವಿದರು ಕಲಾಕೃತಿಗಳನ್ನು ದಾಖಲಿಸುವ ಕಾರ್ಯ ನಮ್ಮಲ್ಲಿ ನಡೆದದ್ದು ತುಂಬಾ ಅಪರೂಪ.

ಆದರೆ ೯೦ರ ದಶಕದ ಆರಂಭದಲ್ಲಿ ಕಲೆಯ ಕುರಿತಾದ ಸಂಶೋಧನಾತ್ಮಕ ಪ್ರಬಂಧಗಳು ಮೆಲ್ಲಮೆಲ್ಲಗೆ ಬೆಳಕಿಗೆ ಬರುತ್ತಲಿವೆ. ಕಾರಣ ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರಾರಂಭವಾಗಿ. ಪಿಹೆಚ್.ಡಿ. ಅಧ್ಯಯನಕ್ಕೆ ತಾತ್ವಿಕವಾಗಿ ಒಪ್ಪಿಗೆ ದೊರೆತ ಮೇಲೆ ಪ್ರಬಂಧಗಳು, ಮಹಾಪ್ರಬಂಧಗಳು ಗೋಚರವಾಗುತ್ತಲಿವೆ. ಹೀಗೆ ಗೋಚರವಾಗುತ್ತಿರುವ ಪ್ರಬಂಧಗಳಲ್ಲಿ ಕೆ. ಜ್ಞಾನೇಶ್ವರವರ ಪ್ರಬಂಧವೂ ಒಂದು.

ಕೆ. ಜ್ಞಾನೇಶ್ವರವರು ತಮ್ಮ ಕಲಾಜೀವನದೊಂದಿಗೆ ಪ್ರವೃತ್ತಗಳನ್ನು ಮೈಗೂಡಿಸಿಕೊಡಿರುವ ಕೇವಲ ಒಬ್ಬ ಕಲಾವಿದರಾಗಿ, ಸ್ವಲ್ಪ ಮಟ್ಟದಲ್ಲಿ ಕಲಾವಿಮರ್ಶಕರಾಗಿ ಚಿತ್ರಕಲೆಯ ಬೆಳವಣಿಗೆ ಅವರ ಮುತ್ತಾತ ತಿಪ್ಪಾಜಿಯವರ ಹೆಸರಿನಲ್ಲಿ ತಿಪ್ಪಾಜಿ ಕಲಾಕುಟೀರವನ್ನು ಸ್ಥಾಪಿಸಿದರು. ಚಿತ್ರಕಲೆಯಲ್ಲದೆ ಶಿಲ್ಪಕಲೆಯಲ್ಲಿಯೂ ಸಹ ಪರಿಣಿತಿ ಪಡೆದ ಜ್ಞಾನೇಶ್ವರವರು ಚಿತ್ರಕಲಾ ಕ್ಷೇತ್ರದಲ್ಲಿ ಅತ್ಯಂತ ಉನ್ನತ ಮಟ್ಟದ ಸಾಧನೆಗೈದ ಹಿರಿಯ ಕಲಾವಿದ ಜ್ಞಾನೇಶ್ವರವರ ಜೀವನ ಸಾಧನೆಯ ಹಾದಿಯಲ್ಲಿ ಚಿತ್ರಕಲಾ ಕ್ಷೇತ್ರಕ್ಕೆ ಅವರು ನೀಡಿದ ಕೊಡುಗೆಯನ್ನು ದಾಖಲೀಕರಣ ಮಾಡುವ ಹಿನ್ನಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನಗಳನ್ನು ಕೊಡಲಾಗಿದೆ.

ಅಧ್ಯಾಯ ಎರಡರಲ್ಲಿ ಜ್ಞಾನೇಶ್ವರವರ ಬಾಲ್ಯದ ಬದುಕು, ಬೆಳೆದ ಪರಿಸರ, ಕಲೆಯ ಕಡೆಗೆ ವಾಲಿದ ಮನಸ್ಸು, ಆಸಂದರ್ಭ ಇದಕ್ಕೆ ಕಾರಣೀಕರ್ತರಾದ ಮತ್ತು ತಮಗೆ ಪ್ರೇರಣೆ ನೀಡಿದ ವ್ಯಕ್ತಿಗಳು, ಗುರುಗಳು ಹಾಗೂ ಹುಬ್ಬಳ್ಳಿಯ ವಿಜಯಮಹಾಂತೇಶ ಕಲಾಮಂದಿರ, ಕಲಾಶಿಕ್ಷಣ, ಅಲ್ಲಿಯ ಕಲಾ ವಾತಾವರಣ, ಕಲಾ ಗುರುಗಳೊಂದಿಗೆ ಅವರ ಬಾಂಧವ್ಯ, ಕಲಾ ಪರಿಸರ, ಸಹಪಾಠಿಗಳು ಕಲಾವಿದನಾಗಿ ಬೆಳೆಯಲು ಪ್ರೇರಣೆ ನೀಡಿದ ಪ್ರಸಂಗಗಳು. ಮುಂದೆ ಜ್ಞಾನೇಶ್ವರವರ ಕುಟುಂಬದ ಕಲಾವಿದರಾದ ತಿಪ್ಪಾಜಿ, ಪರಶುರಾಮಪ್ಪ ಅವರ ತಂದೆ ಕೃಷ್ಣಾಜಿ ಅಣ್ಣ ಕಾಶಿನಾಥ ತಮ್ಮ ನಾರಾಯಣ

ಹೀಗೆ ಇವರ ಮನೆತನವೇ ಕಲಾವಿದರ ಆಸಕ್ತಿ ಕಲಾ ಕುಟಿರವಾಗಿತ್ತು. ಜ್ಞಾನೇಶ್ವರವರಿಗೆ ಕಲೆಯನ್ನು ಕಲಿಯುವ ಆಸಕ್ತಿ ಬಂದಿರುವುದೇ ಅವರ ಮನೆತನದಿಂದ ಎಂದರೆ ತಪ್ಪಾಗಲಾರದು. ಈ ಎಲ್ಲಾ ಹಂತಗಳನ್ನು ಹೇಳಲಾಗಿದ್ದು. ಅಲ್ಲದೇ ಇದನೆಲ್ಲಾ ೭೫ ವರ್ಷದ ವಸಂತಗಳನ್ನು ಪೂರೈಸಿದ ಜ್ಞಾನೇಶ್ವರವರು ಪ್ರಸ್ತುತ ಸತತವಾಗಿ ಕಲಾಕೃತಿಗಳನ್ನು ಮತ್ತು ಶಿಲ್ಪಗಳನ್ನು ಮಾಡುವುದರಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾರೆ. ಕಲೆಗೆ ಮುಡಿಪಾಗಿಟ್ಟ ಬದುಕು ಅವರದ್ದು. ಈ ಕುರಿತಾಗಿ ಇಲ್ಲಿ ಅವರ ಇಡೀ ಬದುಕನ್ನು ಸ್ಥೂಲವಾಗಿ ಕಟ್ಟಿಕೊಡಲಾಗಿದೆ.

ಅಧ್ಯಾಯ ಮೂರರಲ್ಲಿ ಕೆ. ಜ್ಞಾನೇಶ್ವರ ಅವರು ತಮ್ಮ ಬದುಕಿನುದ್ದಕ್ಕೂ ಸಾವಿರಾರು ರೇಖಾಚಿತ್ರಗಳನ್ನು ರಚಿಸಿದ್ದು, ಚಿತ್ರಗಳ ವಿಷಯವಸ್ತು, ರಚಿಸುವ ಕ್ರಮ, ಅವರ ರೇಖೆಗಳಲ್ಲಿ ಲಯ, ನಯಗಾರಿಕೆ, ಭಾವ, ಸಂಚಾರ, ಭಾವಗೀತಾತ್ಮಕತೆ, ಪಳಗಿದ ಕೈಯಿಂದ ಮೂಡಿಬಂದ ರೇಖಾ ಚಿತ್ರಗಳು ಮತ್ತು ಅವರು ರಚಿಸಿದ ವರ್ಣಚಿತ್ರಗಳನ್ನು ವಿಶ್ಲೇಷಣೆಯನ್ನು ಮಾಡಲಾಗಿದೆ. ಇದು ಒಟ್ಟು ಅಧ್ಯಯನದ ಹೃದಯ ಭಾಗದಂತಿದೆ. ಕೆ. ಜ್ಞಾನೇಶ್ವರವರ ಸಾವಿರಾರು ವರ್ಣಕಲಾ ಕೃತಿಗಳು ವೈವಿಧ್ಯಮಯವಾಗಿದೆ. ವಿವಿಧ ವಿಷಯ ವಸ್ತುವನ್ನು ವಿವಿಧ ಮಾಧ್ಯಮಗಳಲ್ಲಿ ರಚಿಸಲಾಗಿದ್ದು, ಅವುಗಳನ್ನು ಇಲ್ಲಿ ವ್ಯವಸ್ಥಿತವಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದ್ದು ಮಹತ್ವಪೂರ್ಣವಾಗಿದೆ. ಇಲ್ಲಿ ವರ್ಣ ಕಲಾಕೃತಿಗಳ ರಚನಾ ಹಿನ್ನೆಲೆ, ಉದ್ದೇಶ, ಸಮಯ ಸಂದರ್ಭ ಬಳಸಿದಂತಹ ಮಾಧ್ಯಮ, ನಿರೂಪಣೆ ಮುಂತಾದವುಗಳ ಕುರಿತು ಹಾಗೂ ಕೆ. ಜ್ಞಾನೇಶ್ವರವರು ರಚಿಸಿದ್ದ ಶಿಲ್ಪಗಳು ಮತ್ತು ಅವುಗಳ ವಿವಿಧ ಮಾಧ್ಯಮಗಳು ಮುಖ್ಯವಾಗಿ ರಚಿಸಿದ್ದ ಕಲಾಕೃತಿಗಳು ರೇಖಾ ಚಿತ್ರಗಳ ಶೈಲಿ. ವಿಶೇಷತೆಯನ್ನು ಗಮನಿಸಿ ಅವುಗಳ ಬಗ್ಗೆ ವಿಶ್ಲೇಷಣೆ ಮಾಡಿ ವಿಮರ್ಶಿಸಲಾಗಿದೆ. ಅದೇ ರೀತಿಯಾಗಿ ವರ್ಣ ಚಿತ್ರಗಳ ಬಗ್ಗೆಯೂ ಯಾವ ಯಾವ ಬಣ್ಣದ ಬಳಕೆಯನ್ನು ಮಾಡಿದ್ದಾರೆ. ಅದರಲ್ಲಿ ತೈಲ ವರ್ಣ, ಜಲವರ್ಣ, ಮಿಶ್ರಮಾಧ್ಯಮಗಳ ವಿಶೇಷತೆಯ ಬಗ್ಗೆ ಹೇಳಲಾಗಿದೆ. ಹಾಗೂ ಶಿಲ್ಪಕಲೆಯ ಕಲಾಕೃತಿಯ ಬಗ್ಗೆಯೂ ವರ್ಣಿಸಲಾಗಿದೆ. ಶಿಲ್ಪಗಳ ಭಂಗಿ ವಿವಿಧ ಬಗೆಯ ವಿನ್ಯಾಸಗಳು ಹಾವ ಭಾವ, ನಿಂತಿರುವ ಭಂಗಿಯನ್ನು ಅಧ್ಯಯದಲ್ಲಿ ವಿಮರ್ಶಿಸಿ ವಿವರಣೆಯನ್ನು ನೀಡಲಾಗಿದೆ. ಒಟ್ಟಾರೆ ಕೆ. ಜ್ಞಾನೇಶ್ವರವರ ಕಲಾಕೃತಿಗಳ ಬಗ್ಗೆ ಈ ಅಧ್ಯಾಯದಲ್ಲಿ ಹೇಳಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕೆ. ಜ್ಞಾನೇಶ್ವರವರ ಒಟ್ಟು ವರ್ಣ ಚಿತ್ರಗಳು ಮತ್ತು ಶಿಲ್ಪಕಲಾಕೃತಿಗಳ ಶೈಲಿ, ಪ್ರಭಾವ, ಪ್ರೇರಣೆ, ತಂತ್ರಗಾರಿಕೆ ಕುರಿತಾದ ಆಳವಾದ ಅಧ್ಯಯನ ಇದಾಗಿರುತ್ತದೆ. ಇಲ್ಲಿ ಮುಖ್ಯವಾಗಿ ಜ್ಞಾನೇಶ್ವರವರ ಮೇಲೆ ತಿಪ್ಪಾಜಿಯವರ ಮತ್ತು ಬೇಲೂರು, ಹಳೇಬಿಡು, ಶಿವಮೊಗ್ಗದ ವಾತಾವಣ ಹಾಗೂ ಜ್ಞಾನೇಶ್ವರವರ ಗುರುಗಳು ಹಾಳಜೋಳವರ ಪ್ರಭಾವ ಪ್ರೇರಣೆ ಸಂಪ್ರಾದಾಯಿಕ ಶಿಲ್ಪಗಳು ಮತ್ತು ವರ್ಣಚಿತ್ರಗಳು ಆಗಿನ ಕಲಾ ಪದ್ಧತಿಗಳು ಇರುವ ಕಲಾಕೃತಿಗಳ ಮೇಲೆ ಮಾಡಿದ ಪ್ರಭಾವ, ಇವುಗಳ ನಡುವಿನ ಸೇತುವೆಯಂತಿರುವ ಜ್ಞಾನೇಶ್ವರವರ ಕಲಾಕೃತಿಗಳ ಬಗ್ಗೆ ವಿಮರ್ಶಾತ್ಮಕವಾಗಿ ಈ ಅಧ್ಯಾಯದಲ್ಲಿ ಕಟ್ಟಿಕೊಡಲಾಗಿದೆ.

ಅಧ್ಯಾಯ ಐದರಲ್ಲಿ ಜ್ಞಾನೇಶ್ವರವರು ಶಿವಮೊಗ್ಗದ ಸಾಹಿತ್ಯ ಸಮ್ಮೇಳನದಲ್ಲಿ ಚಿತ್ರಕಲೆ ಮತ್ತು ಶಿಲ್ಪಕಲಾಕೃತಿಗಳ ಪ್ರದರ್ಶನ ಮಾಡಿದ್ದು, ಎಸ್.ವಿ. ರಂಗಣ್ಣರವರಿಂದ ವೀಕ್ಷಣೆ ಹಾಗೂ ಪ್ರಶಂಸೆ, ಶಿವಮೊಗ್ಗ ದಸರಾ ಚಿತ್ರಸಂತೆಯಲ್ಲಿ ಪ್ರದರ್ಶನ ಮತ್ತು ೧೯೮೮ರಲ್ಲಿ ಸಹ್ಯಾದ್ರಿ ಕಲಾ ಸಂಸ್ಥೆ ಸ್ಥಾಪಿಸಿದ ಪ್ರಯುಕ್ತ ಅಲ್ಲಿ ಪ್ರದರ್ಶನ ನಡೆಯಿತು. ಅದರಲ್ಲಿ ಅಧ್ಯಕ್ಷರಾಗಿ ಟಿ.ವಿ. ಸತ್ಯನಾರಾಯಣಶಾಸ್ತ್ರಿ ಅತಿಥಿಗಳಾದ ಆರ್.ಎಂ. ಹಡಪದ ಉಪಸ್ಥಿತಿಯಲ್ಲಿದ್ದರು. ನಗರದ ಕಲಾವಿದರಾದ ಪುಟ್ಟಣ್ಣ ಎಸ್.ಆರ್. ವೆಂಕಟೇಶ ಜಿ.ಎಂ. ಹೆಗಡೆ, ಗರಗ, ರಾಜಶೇಖರ್, ರಾಂಧ್ಯಾನಿ ಉಪಸ್ಥಿತರಿದ್ದರು. ೧೯೭೬ರಲ್ಲಿ ನಡೆದ ೪೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕರ್ನಾಟಕ ಮುಖ್ಯಮಂತ್ರಿಗಳಾಗಿದ್ದ ಸನ್ಮಾನ್ಯ ಶ್ರೀ ಡಿ. ದೇವರಾಜ ಅರಸರವರಿಂದ ಸನ್ಮಾನ. ೨೦೦೫ ಕರ್ನಾಟಕದ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ಟಿ.ಎನ್. ಚತುರ್ವೇದಿ ಅವರಿಂದ 'ಶಿಲ್ಪ ಕಲಾವಿದ' ಎಂಬ ಬಿರುದಿನೊಂದಿಗೆ ಸನ್ಮಾನಿಸಲಾಯಿತು. ೨೦೦೮ರಲ್ಲಿ ಕರ್ನಾಟಕದ ಶಿಲ್ಪಕಲಾ ಅಕಾಡೆಮಿಯಿಂದ ಜೀವನ್ಮಾನ ಸಾಧಕ ಪ್ರಶಸ್ತಿ ನೀಡಿ ಗೌರವಿಸಿದರು. ಈ ಚಟುವಟಿಕೆಯ ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಆರರಲ್ಲಿ ಸಮಾರೋಪ. ಈ ಅಧ್ಯಾಯದ ಪ್ರಸ್ತುತ ಸಂಶೋಧನಾ ಲಘು ಪ್ರಬಂಧದಲ್ಲಿ ಐದು ಅಧ್ಯಾಯಗಳಲ್ಲಿ ಕುರಿತು ಚರ್ಚಿತವಾದ ಫಲಿತಗಳ ವಿಶ್ಲೇಷಣೆಯನ್ನು ಮಾಡಲಾಗಿದೆ.

ಕೆ. ಜ್ಞಾನೇಶ್ವರವರ ಕಲಾ ಬದುಕು ಅಧ್ಯಾಯಗಳ ವಿಮರ್ಶೆಯನ್ನು ಈ ಅಧ್ಯಯನದಿಂದ ನಮಗೆ ತಿಳಿದು ಬಂದ ವಿಷಯಗಳನ್ನು ಆರು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಇಲ್ಲಿ ವಿಮರ್ಶಾತ್ಮಕ ದೃಷ್ಟಿಯಿಂದ ಈ ಅಧ್ಯಾಯನದ ಫಲಕಗಳನ್ನು ಈ ಕೆಳಕಂಡಂತೆ ತಿಳಿಸಲಾಗಿದೆ.

**ಅಧ್ಯಯನದ ಫಲಿತಗಳು**

ಕೆ. ಜ್ಞಾನೇಶ್ವರವರು ತಮ್ಮ ಮನಸ್ಸಿನ ಪಕ್ವತೆಯ ಭಾವನೆಗಳಿಗೆ ತಕ್ಕಂತೆ ಬಣ್ಣಗಳನ್ನು ಆಯ್ದುಕೊಂಡಿದ್ದು, ಜಲವರ್ಣ ಹಾಗೂ ಶಿಲ್ಪಕಲಾಕೃತಿಗಳಲ್ಲಿ ಪ್ಲಾಸ್ಟರ್ ಆಫ್ ಪ್ಯಾರಿಸ್, ಸಿಮೆಂಟಗಳಲ್ಲಿ ಕಲಾಕೃತಿಯನ್ನು ರಚಿಸಿದ್ದಾರೆ. ಈ ಚಿತ್ರಗಳು ಸಹೃದಯನ ಮನಸ್ಸನ್ನು ಸೂರೆಗೊಳ್ಳುವಂತೆ ವರ್ಣಸಂಯೋಜನೆ ರೇಖೆಗಳ ಲಯಾತ್ಮಕತೆ, ರಂಗುಗಳ ಘನತ್ವ, ಕುಂಚಗಳ ಹರಿದಾಟವಿದೆ. ಹಾಗೂ ಅದ್ಭುತ ಆಳ ಆಕರ್ಷಣೆ ಮತ್ತು ಅರ್ಥವಂತಿಕೆಯನ್ನು ಹೊಂದಿದೆ.

ಅಕಾಡೆಮಿಕ್ ಶೈಲಿಯನ್ನು ರೂಢಿಸಿಕೊಂಡ ಕೆ.ಜ್ಞಾನೇಶ್ವರವರು ಜಲವರ್ಣಗಳನ್ನು ಪ್ರಯೋಗಿಸಿ ಅಭಿವ್ಯಕ್ತಿಸಿದ ಚಿತ್ರಗಳು ಅನೇಕ ಪಾರದರ್ಶಕ ಚಿತ್ರಗಳಲ್ಲಿ ವರ್ಣದ ಬಿಳುಪನ್ನು ಕುಂಚದಿಂದಲೇ ನಿಯಂತ್ರಿಸಿರುವುದನ್ನು ಕಾಣುತ್ತೇವೆ. ಇದರಿಂದ ಜಲವರ್ಣಗಳ ಮೇಲಿನ ಅವರ ಹಿಡಿತ ಮತ್ತು ಪ್ರೌಢಿಮೆಯ ಅರಿವಾಗುತ್ತದೆ. ಭಾವಚಿತ್ರಗಳಲ್ಲಿ ಬಳಸಿದ ಜಲವರ್ಣಗಳು ಚರ್ಮದ ನೈಜ ಅನುಭವ ನೀಡುವುದರೊಂದಿಗೆ ಮಾಸದಂತೆ ತಾಜಾತನವನ್ನು ಹೊಂದಿವೆ.

ಕೆ. ಜ್ಞಾನೇಶ್ವರವರು ನಿಸರ್ಗವನ್ನು ಚಿತ್ರಗಳಲ್ಲಿ ಸ್ವತಂತ್ರವಾಗಿ ರಚಿಸುವುದರ ಜೊತೆಗೆ ಸಂಯೋಜನಾ ಚಿತ್ರಗಳಲ್ಲಿ ಒನ್ನೆಲೆಯಾಗಿ ಸಾಕಷ್ಟು ದುಡಿದಿದ್ದಾರೆ. ನಮ್ಮ ಭಾರತಿಯ ಶೈಲಿಯ

ಸೊಗಡು ಅದರಲ್ಲಿದೆ. ಗಿಡ, ಮರ, ಬಳ್ಳಿ, ಪಕ್ಷಿಗಳು ಎಲ್ಲವನ್ನು ವಿವರವಾಗಿ ನೈಜವಾಗಿ ನೈಜ ವರ್ಣಗಳ ಲೇಪನವನ್ನು ಹೊಂದಿದ್ದು ನಮ್ಮನ್ನು ಭ್ರಮಾಲೋಕಕ್ಕೆ ಕರೆದೊಯ್ಯುತ್ತವೆ.

ಜಲವರ್ಣದ ಭಾವಚಿತ್ರ ಮತ್ತು ನಿಸರ್ಗ ಚಿತ್ರಗಳಲ್ಲಿ ಅನೇಕ ವಸ್ತು ವೈವಿಧ್ಯತೆಯನ್ನು ಕಾಣುತ್ತೇವೆ. ಜೊತೆಗೆ ನೀರು, ಆಕಾಶ, ಪ್ರತಿಬಿಂಬ ಅದರಂತೆ ಬಣ್ಣಗಳ ವೈವಿಧ್ಯತೆಯ ಛಾಯಾ ಮೌಲ್ಯ ದೃಶ್ಯಾಂತರದ ಅನುಭವ ಸ್ಪಷ್ಟವಾಗಿ ಚಿತ್ರಿತವಾಗಿದೆ. ಬಣ್ಣಗಳ ಪಾರದರ್ಶಕತೆ, ವಸ್ತುಗಳ ಗುಣಧರ್ಮಕ್ಕೆ ಮೆರುಗು ತಂದಿದೆ.

ತಮ್ಮ ವ್ಯಕ್ತಿತ್ವದಂತೆಯೇ ಧಾರ್ಮಿಕ ವಸ್ತು ವಿಷಯಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಉತ್ತಮ ಸಂಪ್ರದಾಯದ ನಡತೆಯಂತೆ ಚಿತ್ರ ವಿಷಯಗಳನ್ನು ಕಂಡುಕೊಂಡಿರುವ ಅದನ್ನು ಆ ದೃಷ್ಟಿಕೋನಕ್ಕೆ ಸರಿಯಾಗಿ ಚಿತ್ರಿಸಿರುವ ರೀತಿಗಳ ನಡುವೆ ಅವಿನಾಭಾವ ಸಂಬಂಧವನ್ನು ಕಾಣುತ್ತೇವೆ. ಅವರ ಚಿತ್ರಗಳ ಮುಖಾಂತರ ನಮ್ಮ ಪ್ರಾಚೀನ ಕಾಲದ ಹಿಂದು ಸಂಸ್ಕೃತಿ ಜನಜೀವನದ ಚಿತ್ರಣದ ಜೊತೆಗೆ ಆನಂದವನ್ನು ನೀಡುವ ಸನ್ನಿವೇಶಗಳನ್ನು ನಮ್ಮ ಕಣ್ಣಮುಂದೆ ನಿಲ್ಲಿಸುವ ಶಕ್ತಿ ಪಡೆದಿರುವುದನ್ನು ಕಾಣುತ್ತೇವೆ.

ಜ್ಞಾನೇಶ್ವರವರು ರಚಿಸುತ್ತಿದ್ದ ಶಿಲ್ಪಗಳಲ್ಲಿ ನಮ್ಮ ನಾಡಿನ ಸಂಸ್ಕೃತಿಯು ಮತ್ತು ಬೇಲೂರು ಹಳೇಬಿಡುಗಳ ದೇವಾಲಯದ ಕಂಬಗಳ ಮೇಲಿನ ಶಿಲ್ಪಗಳ ಸೌಂದರ್ಯವು ಜ್ಞಾನೇಶ್ವರವರ ಶಿಲ್ಪಗಳಲ್ಲಿ ಕಾಣಬಹುದು. ಅವರು ಸಾಂಪ್ರದಾಯಿಕ ಶಿಲ್ಪಗಳನ್ನೇ ಹೆಚ್ಚು ಮಾಡುತ್ತಿದ್ದರು. ಹಾಗೂ ಅದರಲ್ಲಿಯೂ ದೇವತೆ ಶಿಲ್ಪಗಳನ್ನು ಮಾಡುತ್ತಿದ್ದರು ಹಾಗೂ ಶಿಲ್ಪಗಳನ್ನು ಅತಿ ಸೂಕ್ಷ್ಮಕೆತ್ತನೆ ಮಾಡುತ್ತಿದ್ದರು. ಹೂ ಬಳ್ಳಿ, ಮನುಷ್ಯಾಕೃತಿ ಹೀಗೆ ಅನೇಕ ರೀತಿಯ ಕಲಾಕೃತಿಯನ್ನು ರಚಿಸಿದ್ದಾರೆ. ವಿವಿಧ ಬಗೆಯ ವಿನ್ಯಾಸ ರಚನೆಯನ್ನು ಸಹ ಮಾಡಿರುದನ್ನು ನಾವು ಕಾಣಬಹುದು.

ಭಾರತೀಯ ಸಂವೇದನೆಗಳಿಗೆ ಅನುಗುಣವಾಗಿ ವೈಯಕ್ತಿಕವಾದ ತಂತ್ರಗಾರಿಕೆ ಶೈಲಿ ಕಲಾ ನೈಪುಣ್ಯತೆಗಳಿಂದ ನೈಜ ಕಲೆಯ ಮೂಲಭೂತ ಸತ್ವಗಳನ್ನು ರಕ್ತಗತ ಮಾಡಿಕೊಂಡು, ಭಾರತೀಯ ಕಾವ್ಯ ನಾಡಿನ ಪುರಾಣ ಇತಿಹಾಸಗಳ ಸತ್ವಭರಿತ ಸನ್ನಿವೇಶಗಳ ಭಾಷಿಕ ರೂಪದಲ್ಲಿನ ವಿವರವಾದ ನಿರೂಪಣೆಯನ್ನು ಕೊಟ್ಟಿದ್ದಾರೆ. ತಮ್ಮದೇ ಆದ ದೇಶಿಯ ಸಂಸ್ಕೃತಿಯನ್ನು ಆಧ್ಯಾತ್ಮಕ ನಿಲುವು ಭಾವಲಾವಣ್ಯ ಆಳವಾದ ಅನುಭವ ವಿವರವಾದ ನಿರೂಪಣೆಯನ್ನು ಹೊಂದಿರುವ ವಿಶಿಷ್ಟತೆ ಇರುವ ಕಲಾಕೃತಿಗಳ ಮೂಲಗುಣವಾಗಿದೆ.

ಸಂಯೋಜನಾ ಚಿತ್ರಗಳಲ್ಲಿ ಕಾನನದ ರಮ್ಯತೆಯ ಸೊಬಗು, ಹಾರಾಡುವ ಪಕ್ಷಿಯನ್ನು ಮತ್ತು ನೆಲದ ಮೇಲಿನ ಹೂವುಗಳಿಗೂ ಅಷ್ಟೇ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಲಯ, ಭಾವ ಅವುಗಳ ಸಂಗತಿಯ ಹಿಂದಿರುವ ಸತ್ಯದ ಅರಿವನ್ನು ಕಾಣುತ್ತೇವೆ.

ಸಂಪ್ರದಾಯಿಕ ಚಿತ್ರಗಳೇ ಹೆಚ್ಚಾಗಿರುವುದರಿಂದ ಅಂತಹ ವಾತಾವರಣ ಇವನ್ನು ನಿರ್ಮಿಸಲು ನೀಲವರ್ಣವನ್ನು ಬಳಸಿ ಚಿತ್ರದಲ್ಲಿ ಸೌಮ್ಯತೆಯನ್ನು ತರುವುದು ವಿಶೇಷವಾಗಿದೆ. ಕೆಲವು ಚಿತ್ರಗಳು

ಭಿತ್ತಿಚಿತ್ರಗಳನ್ನು ನೆನಪಿಗೆ ತರುವ ಗುಣಗಳನ್ನು ಹೊಂದಿದ್ದು, ಸೌಮ್ಯ ಹಾಗೂ ಪ್ರಖರ ವರ್ಣಗಳ ಹದವರಿತ ಮೇಳವಾಗಿ ಸಂಭ್ರಮ ಹಾಗೂ ವೈಭವಯುತ ಪರಿಣಾಮ ಬೀರಿವೆ.

ಸಂಯೋಜನೆಯಲ್ಲಿಯು ಆಕೃತಿಗಳ ವಸ್ತ್ರವಿನ್ಯಾಸಗಳಲ್ಲಿ ತೆಳುವಾದ ಕುಂಚ ಪ್ರಯೋಗಿಸಿ ನೀಡುವ ವರ್ಣಲೇಪನ ಕಲಾಕೃತಿಯ ಮೌಲ್ಯವನ್ನು ಹೆಚ್ಚಿಸುತ್ತೇವೆ. ತೈಲವರ್ಣ ಚಿತ್ರಗಳನ್ನು ರಚಿಸುವಲ್ಲಿಯೂ ಅಷ್ಟೇ ಪ್ರಭುತ್ವವನ್ನು ಸಾಧಿಸಿದ್ದಾರೆ. ಭಾವಚಿತ್ರಗಳಲ್ಲಿ ಜೀವಂತಿಕೆಯನ್ನು ಮೂಡಿಸಿದ್ದಾರೆ. ಒಟ್ಟಾರೆ ವ್ಯಕ್ತಿತ್ವದ ಭಾವನೆಗಳನ್ನು ಮೂಡಿಸುವುದರೊಂದಿಗೆ ತದ್ರೂಪತೆಯನ್ನು ಹೊಂದಿವೆ.

ಭಾವಚಿತ್ರಗಳಲ್ಲಿ ಕಣ್ಣಿನಲ್ಲಿ ಜೀವ ಚೈತನ್ಯ ತುಂಬಿದ್ದಾರೆ. ಕೂದಲೆಳೆಗಳನ್ನು ಎಳೆ ಎಳೆಯಾಗಿ ಚಿತ್ರಿಸಿದ್ದಾರಲ್ಲದೆ, ಬಟ್ಟೆಗಳ ಮೈವಳಿಕೆಯನ್ನು ನೈಜತೆಯನ್ನು ಮೆರೆದಿದ್ದಾರೆ. ಅನೇಕ ಚಿತ್ರಗಳಲ್ಲಿ ಕುಂಚದ ನೇರ ಹೊಡೆತಗಳಲ್ಲದೆ ಬಣ್ಣಗಳನ್ನು ಬೆರೆಸಿ ಮೃದುವಾಗಿ ಲೇಪಿಸಿರುವುದನ್ನು ಕಾಣುತ್ತೇವೆ. ಹಾಗೆಯೇ ತೈಲವರ್ಣಗಳ ಸಂಯೋಜನಾ ಚಿತ್ರಗಳ ಪರಿಣಾಮವನ್ನು ಕಾಣುತ್ತೇವೆ. ಇವರ ಚಿತ್ರಗಳು ವಿದೇಶಿ ಪದ್ಧತಿಯ ಕಲಾ ಶಿಕ್ಷಣದ ರೀತಿಯನ್ನು ಹೊಂದಿದ್ದರು ಭಾವನೆಗಳು, ಅನುಭವಗಳು ಭಾರತೀಯತೆಯನ್ನು ಪ್ರತಿಬಿಂಬಿಸುತ್ತವೆ.

ಕೆ. ಜ್ಞಾನೇಶ್ವರವರ ಕಲಾಸೃಷ್ಟಿಗಳಲ್ಲಿ ಅವರ ಮುತ್ತಾತ ತಿಪ್ಪಾಜಿಯವರ ಮಾನವಾಕೃತಿಯ ಪ್ರಭಾವವು ಇದೆ. ಹಾಗೇಯೆ ಶಿವಮೊಗ್ಗದ ದೇವಾಲಯದಲ್ಲಿನ ಶಿಲ್ಪ ಪರಂಪರೆಯ ಪ್ರಭಾವವೂ ಇದೆ. ಇವರ ಕಲೆಯಲ್ಲಿ ಯಥಾವತ್ ಅನುಕರಣವಿಲ್ಲದ ಆಗಾಗ ಕಲಾವಿದರಿಗೆ ಪರಂಪರೆಯ ಬಗ್ಗೆ ತಿಳುವಳಿಕೆ ಇರಬೇಕು ಎಂಬ ಮಾತು ಇಲ್ಲಿ ಪ್ರಸ್ತುತವೆನಿಸುತ್ತದೆ. ಇವರ ಕಲಾಕೃತಿಗಳಲ್ಲಿ ಶೈಲಿಯ ಛಾಪು ಬಹುಸೂಕ್ಷ್ಮವಾಗಿ ಸ್ಥಾನಪಡೆದಿರುವುದು ದಿಟ. ಇವರ ಕಲಾಕೃತಿಗಳಲ್ಲಿ ರೇಖೆಗಳು ಪ್ರಧಾನ ಪಾತ್ರವಹಿಸುತ್ತವೆ. ವರ್ಣ ಚಿತ್ರಗಳಲ್ಲಿ ಈ ಗಾಢ ರೇಖೆಗಳು ಕಲಾಕೃತಿಯ ಅಂಚನ್ನು ನಿರ್ಮಿಸುವಲ್ಲಿ ತಮ್ಮ ಪ್ರಾಬಲ್ಯವನ್ನು ಮರೆಯುತ್ತವೆ. ಜ್ಞಾನೇಶ್ವರವರು ಪಾರಂಪರಿಕ ಪ್ರತಿಭೆ, ಸಂಯೋಜನೆಯ ಸೂಕ್ಷ್ಮಗಳನ್ನು ಶಿಲ್ಪಗಳಲ್ಲಿ ಮೆರೆದಿರುವುದುಂಟು.

ಶಿಲ್ಪಗಳಲ್ಲಿ ಜ್ಞಾನೇಶ್ವರ ಹಲವು ಪ್ರಯೋಗಗಳನ್ನು ಮಾಡಿರುವುದುಂಟು. ಅದರಲ್ಲಿ ಪ್ಲಾಸ್ಟರ್ ಆಫ್ ಪ್ಯಾರಿಸ್, ಕಂಚು, ಸಿಮೆಂಟ್, ಕಲ್ಲು, ಕಟ್ಟಿಗೆ ಮಾಧ್ಯಮಗಳಲ್ಲಿ ಶಿಲ್ಪಗಳನ್ನು ರಚಿಸಿದ್ದಾರೆ. 'ತಾಯಿ ಮತ್ತು ಮಗು' ಈ ಶಿಲ್ಪವು ಬಾಹ್ಯ ಲಕ್ಷಣವು ಆಕರ್ಷಕವಾಗಿದೆ. ಹಾಗೂ ತುಂಬಾ ಚೆನ್ನಾಗಿ ಮೂಡಿಬಂದಿದೆ. ರಾಧೆ-ಕೃಷ್ಣ ಶಿಲ್ಪವು ಸಹ ತುಂಬಾ ಚೆನ್ನಾಗಿ ಕೆತ್ತನೆಯಾಗಿದೆ. ವೇಷಭೂಷಣವನ್ನು ಅತೀ ಸೂಕ್ಷ್ಮ ರೀತಿಯಿಂದ ಕೆತ್ತಿದ್ದಾರೆ. ದರ್ಪಣ ಸುಂದರಿ, ಕೃಷ್ಣ, ನಿಮಿಶಾಂಬ ಶಿಲ್ಪ, ಗಣಪತಿ ಹಲವು ಬಗೆಯ ಶಿಲ್ಪಗಳನ್ನು ರಚಿಸಿದ್ದಾರೆ. ಕೆ. ಜ್ಞಾನೇಶ್ವರವರು ವೈವಿಧ್ಯಮಯವಾದ ಚಿತ್ರಗಳು ಅವರ ವೈಯಕ್ತಿಕ ಮನೋಧರ್ಮದ ಮೇಲೆ ನೈಜ ಕಲಾಶೈಲಿಯಲ್ಲಿ ಕಲಾಕೃತಿಗಳ ರಚನೆಯನ್ನು ಮಾಡಿದ್ದಾರೆ. ತಮ್ಮ ಕಣ್ಣಲ್ಲಿ ಮನಸ್ಸಿನ ಭಾವನೆಗಳನ್ನು ಜೀವನದ ಕಣಕಣದಲ್ಲಿ ಆವರಿಸಿಕೊಂಡಿರುವ

ಕಲೆಗೆ ತಮ್ಮದೇ ಆದ ವಿಶಿಷ್ಟ ಮೆರಗನ್ನು ಕೊಟ್ಟು ಆಹ್ಲಾದಕರ ರೀತಿಯಲ್ಲಿ ಮನಸ್ಸಿಗೆ ಆನಂದವನ್ನು ನೀಡುವಂಥ ಜನಮನ ಸ್ಫೂರ್ತಿಗೊಳ್ಳುವ ರೀತಿಯಲ್ಲಿ ಚಿತ್ರಿಸಿರುವುದನ್ನು ಅವರು ಈ ಎಲ್ಲ ವರ್ಣ ಚಿತ್ರಗಳ ಅಧ್ಯಯನದಿಂದ ತಿಳಿದುಬರುತ್ತದೆ.

ಶಿವಮೊಗ್ಗದ ಸಾಂಸ್ಕೃತಿಕ ಪರಿಸರವು ಕಲಾವಿದರಾದ ಜ್ಞಾನೇಶ್ವರವರ ಮೇಲೆ ಪ್ರಭಾವ ಬೀರಿ ಅವರೊಬ್ಬ ದೊಡ್ಡ ಕಲಾವಿದರಾಗಿ ರೂಪಗೊಳ್ಳಲು ಕಾರಣವಾಗಿದೆ ಎಂಬ ವಿಷಯವನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಅಲ್ಲದೇ ಕಲಾವಿದರಾಗಿ ಇನ್ನೂ ದೊಡ್ಡ ಸಾಧನೆಗಳನ್ನು ಮಾಡುವುದು ಜ್ಞಾನೇಶ್ವರವರ ಗುರಿ.

ಜ್ಞಾನೇಶ್ವರವರು ಒಟ್ಟು ಕಲಾಕೃತಿಗಳನ್ನು ಸಮೀಕ್ಷಿಸಿದಾಗ ರೇಖಾಚಿತ್ರ, ವರ್ಣಚಿತ್ರ, ಶಿಲ್ಪಕಲಾಕೃತಿಗಳು, ಛಾಯಾಚಿತ್ರಗಳಲ್ಲಿ ಕುತೂಹಲಕರ ಅಂಶಗಳು ಕಂಡುಬರುತ್ತದೆ. ಮತ್ತು ಈ ಅಧ್ಯಾಯದ ಹಂತಗಳಾಗಿರುವ ಎಲ್ಲ ಅಧ್ಯಾಯಗಳನ್ನು ಸಮೀಕ್ಷಿಸಿದಾಗ ಇವರು ಅಭಿಜಾತ ಕಲಾವಿದರು ಎಂದು ಹೇಳಬಹುದು.

**ಅಧ್ಯಯನದ ಪ್ರಮುಖ ಫಲಿತಗಳು**

ಜ್ಞಾನೇಶ್ವರವರ ರೇಖಾಚಿತ್ರಗಳು, ಭಾವಚಿತ್ರಗಳು ಮತ್ತು ಪೂರ್ಣಭಾವ ಚಿತ್ರಗಳು, ಶಿಲ್ಪಕಲಾ ಕೃತಿಗಳು ಜೀವಂತಿಕೆಯಿಂದ ಕೂಡಿದ್ದು, ಭಾವನೆಗಳ ಜೊತೆಗೆ ಸ್ಪಂಧಿಸುತ್ತವೆ. ಇವರ ಕೆಲವು ರೇಖಾಚಿತ್ರಗಳು ವರ್ಣದಲ್ಲಿ ಇದ್ದರೆ ಇನ್ನು ಕೆಲವು ಕಲಾಕೃತಿಗಳು ಪೆನ್ಸಿಲ್, ಚಾರಕೋಲ ಮಾಧ್ಯಮದಲ್ಲಿ ನೈಜತೆಯನ್ನು ಮೂಡಿಸಿವೆ. ದಿನನಿತ್ಯ ರಚಿಸುತ್ತಿದ್ದ ರೇಖಾಚಿತ್ರಗಳು ಹಾಗೂ ಸಂಯೋಜನಾ ಚಿತ್ರಗಳ ಕೆಲವು ವಿಶಿಷ್ಟವಾದ ಶೈಲಿಯಲ್ಲಿವೆ.

ಇವರ ಕೆಲವು ಸಂಯೋಜನಾ ಕೃತಿಗಳು ಪೂರ್ಣತಃ ಚಿತ್ರಗಳು ಸೆಮಿಮಾಡರ್ನ್ ಶೈಲಿಯಲ್ಲಿವೆ. ಜ್ಞಾನೇಶ್ವರವರ ವರ್ಣಚಿತ್ರಗಳಲ್ಲಿ ಬೇರೆ ಬೇರೆ ಶೈಲಿಯ ಮತ್ತು ವಿಧಾನಗಳನ್ನು ಗುರುತಿಸಲಾಗಿದೆ. ಭಾವಚಿತ್ರಗಳಲ್ಲಿನ ವೇಗವಾದ ಚಲನೆಯಿಂದ ಕೂಡಿದ ಸೆಳೆತಗಳು ವರ್ಣವೈಖರಿ, ಹಿನ್ನೆಲೆ, ಮುನ್ನೆಲೆಯಲ್ಲಿ ಅಳವಡಿಸುವ ಸ್ಥಳವಕಾಶ ವಿಶಿಷ್ಟ ಅಂಶಗಳಾಗಿವೆ.

ಅದೇ ರೀತಿಯಾಗಿ ಜ್ಞಾನೇಶ್ವರವರು ರಚಿಸಿದ್ದಾರೆ. ಹೆಚ್ಚಿನದಾಗಿ ಸಾಂಪ್ರದಾಯಿಕ ಶೈಲಿಯಲ್ಲಿರುವ ಶಿಲ್ಪಗಳನ್ನು ಮಾಡಿದ್ದಾರೆ. ಅದರಲ್ಲಿ ವಿಶೇಷವಾಗಿ ಕಾಣುವ ವಿನ್ಯಾಸಗಳು ಹಾಗೂ ಲಯ, ಪ್ರಮಾಣ ಬದ್ಧತೆ. ಹೀಗೆ ಅನೇಕ ರೀತಿಯ ಹೊಸ ವಿನ್ಯಾಸಗಳನ್ನು ತಮ್ಮ ಸೂಕ್ಷ್ಮ ಕೆತ್ತನೆಯಲ್ಲಿ ಶಿಲ್ಪಗಳನ್ನು ರಚಿಸಿದ್ದಾರೆ.

ಇವರು ರಚಿಸಿದ ಗಣಪತಿ, ತಾಯಿ ಮತ್ತು ಮಗು, ನಿರ್ಮಿಸಿದ ದೇಶಿಯ ಶಿಲ್ಪ ಇವುಗಳನ್ನು ನೋಡಿದರೆ ವಿಶೇಷವೆನಿಸುವುದು ಹಾಗೂ ನೋಡುಗನಿಗೆ ಸಂತೋಷವನ್ನು ನೀಡುತ್ತದೆ. ಇವರು ಬಳಸುವ ವರ್ಣ ವೈವಿಧ್ಯತೆ ಕಣ್ಣಿಗೆ ಆನಂದವನ್ನು ಉಂಟುಮಾಡುವುದು ವಿಶೇಷ. ಸಂಯೋಜನಾ

ಚಿತ್ರಗಳಲ್ಲಿ ಸುತ್ತ ಮುತ್ತಲಿನ ಪರಿಸರ ಹಾಗೂ ಪೌರಾಣಿಕ ವಿಷಯಗಳನ್ನು ಇಲ್ಲಿ ಹೆಚ್ಚು ಪ್ರತಿನಿಧಿಸುವ ಹಾಗೆ ಚಿತ್ರಕಲೆಯೊಂದಿಗೆ ಬೆಳೆದು ಬಂದಿರುವುದು ಈ ಅಧ್ಯನದುದ್ದಕ್ಕೂ ಕಂಡುಬರುವುದು.

ಪ್ರವಾಹಗಳಲ್ಲಿ ಬದುಕಲು ಸಾಧ್ಯವಿಲ್ಲಿ, ಎಲ್ಲವೂ ಪ್ರಯೋಗವೆ ಸ್ಪಷ್ಟವಾದ ಕಲ್ಪನೆ ಅಗತ್ಯ ಎನ್ನುವ ಜ್ಞಾನೇಶ್ವರವರು ತಮ್ಮ ಪ್ರಯೋಗಗಳ ರಚನೆಯ ಹಿನ್ನೆಲೆಯಲ್ಲಿ ಎಂದೂ ಕಾಣದ ಕಲ್ಪನೆಗಳನ್ನು ದೃಶ್ಯದ ಮುಖಾಂತರ ಪ್ರಕಟಗೊಳಿಸಿದ್ದಾರೆ. ಇದರ ಮುಖಾಂತರವಾಗಿ ನಮ್ಮ ನೆಲದ ಸಂಸ್ಕೃತಿಯಲ್ಲಿ ಚಿತ್ರಕಲೆಗೆ ಪ್ರಾಮುಖ್ಯತೆಯನ್ನು ತಂದುಕೊಟ್ಟಿದ್ದಾರೆ. ನಮ್ಮ ನಾಡಿನ ಚಿತ್ರಕಲೆಯ ಅಧ್ಯಯನದಲ್ಲಿ ಜ್ಞಾನೇಶ್ವರವರ ಜೀವನ ಕಲಾಕೃತಿಗಳ ಮತ್ತು ಕಲಾಶಿಕ್ಷಣದ ಮೂಲಕ ಅವರ ಸಾಧನೆ ತುಂಬ ಮಹತ್ವ ಪೂರ್ಣವಾದುದು, ಮೌಲಿಕವಾಗಿದೆ.

ಸಾವಿರಾರು ಕಲಾಕೃತಿಗಳನ್ನು ತಮ್ಮ ಬದುಕಿನುದ್ದಕ್ಕೂ ಜ್ಞಾನೇಶ್ವರವರು ಹಲವು ಮಾಧ್ಯಮಗಳಲ್ಲಿ ಕಲಾಕೃತಿಗಳನ್ನು ಬೇರೆ ಬೇರೆ ದೃಷ್ಟಿಗಳಿಂದ ಸಂಶೋಧನಾತ್ಮಕ ಅಧ್ಯಯನ ನಡೆಸಬಹುದಾಗಿದೆ. ರೇಖಾಚಿತ್ರ, ವರ್ಣಚಿತ್ರ, ಶಿಲ್ಪಗಳ ಕುರಿತಾಗಿ ಪ್ರತ್ಯೇಕ ಅಧ್ಯಯನ ಮಾಡಬಹುದಾದಷ್ಟು ಆಕರ ಸಾಮಗ್ರಿ ಜ್ಞಾನೇಶ್ವರವರಲ್ಲಿದೆ. ಹಾಗೂ ಪರಸ್ಪರ ಮಾಧ್ಯಮಗಳನ್ನು ಕುರಿತು ತುಲನಾತ್ಮಕ ಅಧ್ಯಯನ ಮಾಡುವ ಅಗತ್ಯತೆ ಹಾಗೂ ಸಾಧ್ಯತೆಗಳು ಬೇಕಾದಷ್ಟು ಇವೆ.

ಇವು ಮೇಲ್ನೋಟಕ್ಕೆ ಗೋಚರಿಸುವ ಹೊಸ ಅಧ್ಯಯನ ಕ್ಷೇತ್ರಗಳು. ಒಂದೆರಡು ನಿದರ್ಶನಗಳು ಇವುಗಳಿಂದ ನಿದಿತವಾಗುವ ಕಲಾವಿದ ಕೆ. ಜ್ಞಾನೇಶ್ವರವರ ಅಧ್ಯಯನ ನೆಲೆಯಲ್ಲಿ ಉತ್ತಿ, ಭಿತ್ತಿ ಬೆಳೆದುಕೊಳ್ಳಬೇಕೆನ್ನುವ ಸಂಶೋಧಕರಿಗೆ ಅವಕಾಶಗಳು ಸಮೃದ್ಧವಾಗಿವೆ ಎಂಬ ಸತ್ಯದೊಂದಿಗೆ ಈ ಮಹಾಪ್ರಬಂದವನ್ನು ಸಮಾರೋಪಿಸಬಹುದು.

ಎಲ್ಲಾ ರೀತಿಯಲ್ಲಿಯು ಜ್ಞಾನೇಶ್ವರವರು ಒಬ್ಬ ಮಹಾ ಕಲಾವಿದನಾಗಿ ಜನರ ಮನಸ್ಸಿನಲ್ಲಿ ಮನೆ ಮಾಡಿದ್ದಾರೆ. ಇವರ ಅಧ್ಯಯನ ಮಾಡಿದಾಗ ತಿಳಿದು ಬಂದ ಸತ್ಯ ಎಂದರೆ ಒಬ್ಬ ಬಿ.ಎಸ್ಸಿ ಪದವಿದಾರರಾದ ಜ್ಞಾನೇಶ್ವರವರು ಕಲಾ ಜಗತ್ತಿನಲ್ಲಿ ಈ ಒಂದು ಸಾಧನೆಯನ್ನು ಮಾಡಿರುವುದು ಅವರಿಗಿರುವ ತಾಳ್ಮೆ ಎಂದರೆ ತಪ್ಪಿಲ್ಲ. ಹಾಗೂ ಅವರ ಮನೆತನದಲ್ಲಿ ಎಲ್ಲರೂ ಕಲಾ ಸರಸ್ವತಿಯನ್ನು ಒಲಸಿಕೊಂಡವರು. ಹಾಗೂ ಕಲಾ ಪರಂಪರೆಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಜ್ಞಾನೇಶ್ವರವರು ರಚಿಸುವ ಶಿಲ್ಪಗಳು ಮತ್ತು ಚಿತ್ರಗಳ ಬಗ್ಗೆ ತಿಳಿಸುವ ಒಂದು ಸಣ್ಣ ಪ್ರಯತ್ನ ಈ ಅಧ್ಯಯನ.

ನಾವು ನೋಡುವ ಶಿಲ್ಪಗಳು, ಚಿತ್ರಗಳನ್ನು ನೋಡುವಾಗ ಸಿಗುವ ಆನಂದವು ಅವುಗಳ ಹಿನ್ನೆಲೆಯ ಇತಿಹಾಸವನ್ನು ನೋಡುವುದರಿಂದ ಸಿಗಲಾರದು. ಹಾಗೇ ಕಲಾವಿದ ರಚಿಸುವಾಗ ಆಗುವ ಲಾಭ ನಷ್ಟವನ್ನು ಯೋಚಿಸದೇ ತಮ್ಮ ಗುರಿಯನ್ನು ಮುಟ್ಟುವುದು ಕಲಾವಿದನ ಲಕ್ಷಣ. ಜ್ಞಾನೇಶ್ವರವರು ಅನೇಕ ಚಿತ್ರಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಜಲವರ್ಣ, ತೈಲವರ್ಣ, ಪೋಸ್ಟರ್ ವರ್ಣ, ಅಕ್ರೈಲಿಕ್‌ವರ್ಣ ಮತ್ತು ಮಣ್ಣಿನಿಂದ ಮಾಡಿದ ಶಿಲ್ಪಗಳು ಕಲ್ಲಿನಿಂದ ರಚಿಸಿದ ಶಿಲ್ಪಗಳು ಈಗ ಅನೇಕ ರಿತಿಯ ಹೊಸ ಪ್ರಯೊಗಗಳನ್ನು ಜ್ಞಾನೇಶ್ವರವರು ಮಾಡಿದ್ದಾರೆ. ಈ ಎಲ್ಲವು ನೋಡುಗನಲ್ಲಿ

ರಸಸ್ವಾಧನೆಯನ್ನು ಉಂಟುಮಾಡುತ್ತವೆ. ಹಾಗೂ ಸಹೃದಯದಲ್ಲಿಯೂ ಕಲೆಯ ಬಗ್ಗೆ ಎತ್ತರದ ಸ್ಥಾನವನ್ನು ನೀಡುವಷ್ಟು ಪರಿಣಾಮವನ್ನು ಜ್ಞಾನೇಶ್ವರವರ ಕಲಾಕೃತಿಗಳಲ್ಲಿ ನೆಲೆ ಮಾಡಿವೆ. ಇವರು ರಚಿಸಿದ ಶಿಲ್ಪಗಳ ಮತ್ತು ಚಿತ್ರಗಳು ದೇಶ ವಿದೇಶಗಳಲ್ಲಿ ಹೆಸರು ಮಾಡಿವೆ. ಇವರ ಕಲ್ಲಿನ ಮಾಧ್ಯಮ ಹಾಗೂ ಚಿಕಣಿ ಚಿತ್ರಕಲೆ, ಮಣ್ಣಿನ ಶಿಲ್ಪಗಳು ಹೀಗೆ ಎಲ್ಲಾ ರೀತಿಯ ಕಲಾಕೃತಿಗಳನ್ನು ಜ್ಞಾನೇಶ್ವರವರು ರಚಿಸಿದ್ದು ಇವರ ಕಲಾಕೃತಿಗಳು ಎಲ್ಲೇ ಇರಲಿ ನೋಡಿದ ತಕ್ಷಣ ಇದು ಜ್ಞಾನೇಶ್ವರವರ ಕಲಾಕೃತಿಗಳೇ ಎಂದು ನಮಗೆ ತಿಳಿಯುತ್ತದೆ. ಅವರು ಬಳಸುವ ಶೈಲಿ ತಂತ್ರಗಾರಿಕೆ ಎಲ್ಲಾ ವಿಶೇಷವಾಗಿರುತ್ತದೆ ನೋಡುವವರಿಗೆ ತಕ್ಷಣಕ್ಕೆ ತಿಳಿದುಬಿಡುತ್ತದೆ.

ಜ್ಞಾನೇಶ್ವರವರಿಗೆ ಅವರದೇ ಆದ ಶಿಷ್ಯ ಬಳಗವಿದೆ. ಅವರಿಗೆಲ್ಲ ತರಬೇತಿ ನೀಡಿ ನಾಡಿಗೆ ಅವರನ್ನು ಕಲಾವಿದರನ್ನಾಗಿ ನೀಡಿದ್ದಾರೆ. ಇದು ಗಮನಾರ್ಹ ಮುಂದೆ ಈ ಪರಂಪರತೆಯನ್ನು ಮುಂದುವರೆಸಿಕೊಂಡು ಹೋಗುವ ಜವಾಬ್ದಾರಿ ಶಿಷ್ಯವರ್ಗದ್ದು. ಹಾಗೂ ಜ್ಞಾನೇಶ್ವರವರ ಮಗನಾದ ಪ್ರವೀಣ್‌ಕುಮಾರ್ ಅವರದ್ದು ಎಂದು ಜ್ಞಾನೇಶ್ವರವರು ಹೇಳುತ್ತಾರೆ.

ಒಟ್ಟಿನಲ್ಲಿ ಈ ಅಧ್ಯಯನದಿಂದ ತಿಳಿದುಬರುವ ಸತ್ಯವೆಂದರೆ ಇವರ ಸಾಧನೆಗೆ ಎಂದೂ ಸಾವಿಲ್ಲ. ಜನರ ಮನಸ್ಸಿನಲ್ಲಿ ಸದಾಕಾಲ ಉಳಿಯುವಷ್ಟು ಕಲಾಜಗತ್ತಿನಲ್ಲಿ ಜ್ಞಾನೇಶ್ವರವರು ಬೆಳೆದಿದ್ದಾರೆ. ಶಿಲ್ಪ ಮತ್ತು ಚಿತ್ರ ಎರಡನ್ನು ರಚಿಸುವ ಜ್ಞಾನೇಶ್ವರಂತವರು ತುಂಬಾ ಕಡಿಮೆ. ಇವರನ್ನು 'ಅಭಿಜಾತ' ಕಲಾವಿದ ಎಂದರೆ ತಪ್ಪಾಗಲಾರದು ಎಲ್ಲಾ ರೀತಿಯಲ್ಲಿಯು ಪ್ರಯೋಗಶೀಲರು ಹಾಗೂ ಕ್ರಿಯಾಶೀಲರಾಗಿದ್ದಾರೆ ಎಂದು ಹೇಳಬಹುದು. ಇವರ ಕುರಿತ ಪ್ರಸ್ತುತ ಅಧ್ಯಯನ ಮುಂದಿನ ಪೀಳಿಗೆಗೆ ಉಪಯುಕ್ತವೆನಿಸುವುದರಲ್ಲಿ ಸಂಶಯವಿಲ್ಲ.

* * *

## ಜ್ಞಾನೇಶ್ವರವರು ಪಡೆದ ಪ್ರಶಸ್ತಿಗಳು ಮತ್ತು ಪ್ರದರ್ಶನ

* ಶಿವಮೊಗ್ಗದ ಸಾಹಿತ್ಯ ಸಮ್ಮೇಳನದಲ್ಲಿ ಚಿತ್ರಕಲೆ ಮತ್ತು ಶಿಲ್ಪಕಲೆ ಪ್ರದರ್ಶನ, ಶ್ರೀ ಎಸ್.ವಿ. ರಂಗಣ್ಣವರಿಂದ ವೀಕ್ಷಣೆ ಹಾಗೂ ಪ್ರಶಂಸೆ.
* ಶಿವಮೊಗ್ಗದ ದಸರಾ ಚಿತ್ರಸಂತೆಯಲ್ಲಿ ಪ್ರದರ್ಶನ ಶಿವಮೊಗ್ಗದ ಕರ್ನಾಟಕ ಸಂಘದಲ್ಲಿ ಸಮೂಹ ಚಿತ್ರಕಲಾ ಪ್ರದರ್ಶನ
* ೧೯೮೮ರಲ್ಲಿ ಸಹ್ಯಾದ್ರಿ ದೃಶ್ಯಕಲಾ ಸಂಸ್ಥೆ ಸ್ಥಾಪಿಸಿ ಪ್ರದರ್ಶನ ಏರ್ಪಡಿಸಿದ್ದರು. ಅಧ್ಯಕ್ಷ ಬೆ.ವಿ. ಸತ್ಯನಾರಾಯಣ ಶಾಸ್ತ್ರಿ ಅತಿಥಿಗಳಾದ ಆರ್.ಎಂ. ಹಡಪದ ಉಪಸ್ಥಿತರಿದ್ದರು. ನಗರದ ಕಲಾವಿದರಾದ ಪುಟ್ಟಣ್ಣ ಎಸ್.ಆರ್. ವೆಂಕಟೇಶ ಜಿ.ಎಂ. ಹೆಗಡೆ, ಗರಗ, ರಾಜಶೇಖರ್, ರಾಮಧ್ಯಾನಿ ಉಪಸ್ಥಿತರಿದ್ದರು.
* ಶಿವಮೊಗ್ಗೆಯಲ್ಲಿ ೧೯೭೬ರಲ್ಲಿ ೪೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ಸನ್ಮಾನ್ಯ ಶ್ರೀ ಡಿ. ದೇವರಾಜ ಅವರಸ್‌ರವರಿಂದ ಸನ್ಮಾನ
* ೨೦೦೫ ಕರ್ನಾಟಕದ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ಟಿ.ಎನ್. ಚರ್ತುವೇದಿ ಅವರಿಂದ "ಶಿಲ್ಪ ಕಲಾ ಕೋವಿದ" ಎಂಬ ಬಿರುದಿನೊಂದಿಗೆ ಸನ್ಮಾನಿಸಲಾಯಿತು.
* ಕರ್ನಾಟಕ ಶಿಲ್ಪಕಲಾ ಅಕಾಡೆಮಿ ೨೦೦೮ ಮತ್ತು ೨೦೦೯ರ ಗೌರವ ಪ್ರಶಸ್ತಿ ಪ್ರಧಾನ ಸಂಮಾಂಭದಲ್ಲಿ ವಾರ್ಷಿಕ ಶಿಲ್ಪ ಕಲಾ ಪ್ರದರ್ಶನದಲ್ಲಿ 'ಜೀವನ್ಮಾನ ಸಾಧಕ'
* ಹಸಿವು ಎಂಬ ಶೀರ್ಷಿಕೆಯನ್ನಿಟ್ಟು ತಾಯಿ ಮಗುವಿನ ಶಿಲ್ಪವನ್ನು ಮಣ್ಣಿನ ಟೆರಾಕೋಟ ಮಾಧ್ಯಮದಲ್ಲಿ ರಚಿಸಿ ಶಿವಮೊಗ್ಗೆಯಲ್ಲಿ ಪ್ರದರ್ಶಿಸಿದಾಗ ಇಂಗ್ಲಿ, ವಾರಪತ್ರಿಕೆಯಲ್ಲಿ ಮುಖಪುಟದಲ್ಲಿದೆ. ಅಲ್ಲೂ ಸಹ ಜನಮನ್ನಣೆ ದೊರಕಿತು.

## ಸನ್ಮಾನ ಮತ್ತು ಗೌರವ ಪುರಸ್ಕಾರಗಳೊಂದಿಗಿನ ಛಾಯಚಿತ್ರಗಳು










ಸಮ್ಮೇಳನಾಧ್ಯಕ್ಷಕರಾಗಿದ್ದ ಶ್ರೀ ಎಸ್.ವಿ ರಂಗಣ್ಣರವರಿಂದ ಶಿಲ್ಪಕಲಾಕೃತಿಯೊಂದರ ವೀಕ್ಷಣೆ ಹಾಗೂ ಪ್ರಶಂಸೆ



ಶ್ರೀ ಧರ್ಮಸ್ಥಳದ ಧರ್ಮಾಧಿಕಾರಿಗಳಾದ "ಶ್ರೀ ಡಿ. ವೀರೇಂದ್ರ ಹೆಗ್ಗಡೆ" ಹಾಗೂ ಶಿವಮೊಗ್ಗೆಯ ಸರ್ವಸಿದ್ಧಿ ವಿನಾಯಕ ಸೇವಾಸಮೀತಿಯ ಪದಾಧಿಕಾರಿಗಳೊಂದಿಗೆ ೧೯೭೬



ಶಿವಮೊಗ್ಗೆಯಲ್ಲಿ ೧೯೭೬ರಲ್ಲಿ ನಡೆದ ೪೮ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ಸನ್ಮಾನ್ಯ ಶ್ರೀ ಡಿ. ದೇವರಾಜ್ ಅರಸರವರಿಂದ ಸನ್ಮಾನಿಸಲ್ಪಡಿತ್ತಿರುವುದು.



ಶ್ರೀ ಹೆಚ್. ಎನ್. ಬಹುಗುಣರೊಂದಿಗೆ ೧೯

## ಪ್ರಶಸ್ತಿ ಪತ್ರಗಳು ಮತ್ತು ಪುರಸ್ಕಾರಗಳು

Shilpotsava
1989

This Certificate is presented to
Sri K. Gnaneshwar
for actively participating in the festival of traditional sculpture, painting and deliberation held from 16th to 20th September at the Venkatappa Art Gallery, Kasturba Road, Bangalore-560001

Prof. S. K. Ramachandra Rao
President

D. Vadiraj
Secretary

SHILPAKALA PRATISHTANA



ಕರ್ನಾಟಕ ಶಿಲ್ಪಕಲಾ ಅಕಾಡೆಮಿ



ಮೈಸೂರ ರಾಜ್ಯ ಲಲಿತ ಕಲಾ ಅಕಾಡೆಮಿಯಿಂದ ಸಹಕರಿಸಲ್ಪಟ್ಟ

ದಿ ಕರ್ನಾಟಕ ಆರ್ಟ ಸೊಸೈಟಿಯ

ಕಲಾ ಪ್ರದರ್ಶನ

ಧಾರವಾಡ

೧೯೬೩

ಶ್ರೀ ಕೆ ಜ್ಞಾನೇಶ್ವರ ಅವರು

ಮೂರ್ತಿ ಶಿಲ್ಪ ವಿಭಾಗದಲ್ಲಿ

೨ (ಎರಡನೇಯದು) ನೇಯ ಬಹುಮಾನ ವಿಜೇತರು

ಸ್ಥಳೀಯ ಸಂಚಾಲಕರು

ಶ್ರೀ ಕೆ. ಆರ್. ರಾಮಚಂದ್ರನ್
ಮುಖ್ಯ ಅತಿಥಿ

ಡಾ. ಸರೋಜಿನಿ ಮಹಿಷಿ
ಅಧ್ಯಕ್ಷರು

## ಕಲಾವಿದ ಕೆ. ಜ್ಞಾನೇಶ್ವರ ಅವರ ಕಲಾಕೃತಿ ನೆಲೆಗಳು

೧. ಶಿವಮೊಗ್ಗ
೨. ಹಿಮಾಚಲ್-ಧರ್ಮಶಾಲ್
೩. ತಮಿಳುನಾಡು-ಶೇಲ್ಂ
೪. ಹುಬ್ಬಳ್ಳಿ
೫. ಮೈಸೂರು
೬. ಅಮೇರಿಕಾ ನ್ಯೂಜರ್ಸಿ
೭. ಬೆಂಗಳೂರು
೮. ಮಧುರೈ
೯. ಕೊಹಿಮುತ್ತುರ್
೧೦. ಮಂಗಳೂರು
೧೧. ಬೆಳಗಾಂ
೧೨. ರಾಯಚೂರ
೧೩. ಕೊಪ್ಪಳ
೧೪. ದಾವಣಗೆರೆ
೧೫. ಚಿಕ್ಕಮಗಳೂರು

## ಕಲಾವಿದರ ಬಗ್ಗೆ ಪ್ರಕಟವಾದ ಪತ್ರಿಕಾ ಅಂಕಣಗಳು

### ಕಲಾವಿಕಾಸಕ್ಕೆ ಸಾಕ್ಷಿಯಾದ ವಿಕಾಸ ಶಾಲಾ ಮಕ್ಕಳ 'ಹೊಂಗಿರಣ'

... ಹಾಗೂ ಗಳಗನಾಥ ದೇವಾಲಯ, ... ಗಜಶಾಲೆ, ... ಲಾಂಥನ, ... - ಇವೆಲ್ಲ ಶಿವಮೊಗ್ಗದಲ್ಲಿ ... ಅದರೆ ಇವುಗಳನ್ನೆಲ್ಲಾ ... ಹಾಗೂ ನಾಳೆ ಶಿವಮೊಗ್ಗದಲ್ಲಿ ... ಅವಕಾಶವನ್ನು ಶಿವಮೊಗ್ಗದ ... ವಿದ್ಯಾರ್ಥಿಗಳು ನೀಡಿದ್ದಾರೆ.

ಹೌದು. ಇಂದು ಬೆಳಗ್ಗೆ ... ವಿಕಾಸ ವಿದ್ಯಾಸಮಿತಿ ಶಾಲೆಯಲ್ಲಿ ... ಎರಡು ದಿನಗಳ ಕಲಾ ಮತ್ತು ವಿಜ್ಞಾನ ವಸ್ತು ಪ್ರದರ್ಶನದಲ್ಲಿ ಶಿಕ್ಷಕರ ... ಕಲಾವಂತಿಕೆ ಮೆರೆದಿರುವ ವಿದ್ಯಾರ್ಥಿಗಳು ತಯಾರಿಸಿರುವ ಐತಿಹಾಸಿಕ ... ಮನಮೋಹಕ ದೃಶ್ಯವಿದು.

ಎರಡು ದಿನಗಳ ವಸ್ತು ಪ್ರದರ್ಶನಕ್ಕಾಗಿ 15 ರಿಂದ 30 ದಿನಗಳ ಕಾಲ ಕಲಾಕೃತಿಗಳ ಮಾದರಿ ತಯಾರಿಸಿದ ವಿದ್ಯಾರ್ಥಿಗಳು ತಮ್ಮ ಪ್ರತಿಭೆಯನ್ನು ಅನಾವರಣಗೊಳಿಸಿದ್ದಾರೆ. ಕೋಲ್ಕತ್ತದ ವೈಷ್ಣವಪುರದ ಪುರಾಣ ಪ್ರಸಿದ್ಧ ಶ್ಯಾಮರಾಯ ದೇವಸ್ಥಾನವನ್ನು ನಿರ್ಮಿಸಿರುವ ಸಾಯಿಶ್ ಮತ್ತು ತಂಡ ದೇವಾಲಯದ ಹೊರನೋಟ ಕಣ್ಣುಕಟ್ಟುವಂತೆ ಮಾಡಿದ್ದಾರೆ. ಮುಂದೆ ಸಾಗಿದರೆ, ಮುಂಬಾರ್ ಶೆಣೈ ಹಾಗೂ ಧನ್ಯ ತಂಡ ಮೂರುವಾರಗಳ ಕಾಲ ನಿರ್ಮಿಸಿದ ಅಮೆರಿಕಾದ ಸ್ಟ್ಯಾಚ್ಯು ಆಫ್ ಲಿಬರ್ಟಿ ಮನಸೆಳೆಯುತ್ತದೆ.

ಚಾಲುಕ್ಯ ಅರಸ 2ನೇ ವಿಕ್ರಮಾದಿತ್ಯನ ಕಾಲದಲ್ಲಿ ಪಟ್ಟದಕಲ್ಲಿನಲ್ಲಿ ನಿರ್ಮಿಸಿದ ಗಳಗನಾಥ ದೇವಾಲಯದ ನಿರ್ಮಾಣದಲ್ಲಿ 15 ದಿನಗಳ ತಮ್ಮ ಶ್ರಮದ ಕ್ರಮ ವಿವರಿಸುವ ಜಯಶ್ರೀ-ಕೀರ್ತನಾ ಅರ್ಜುನ್ ಅವರಿದಂತೆ ದೇವಾಲಯದ ವಿವರಣೆ ನೀಡುತ್ತಾರೆ.

'ಕಲೆ'ಯಷ್ಟೇ 'ಹಾಳು' ಆಗಿರುವುದಕ್ಕೆ ಹೆಸರುವಾಸಿಯಾಗಿರುವ ಹಂಪೆಯ ಸ್ಮಾರಕಗಳಾದ ಉಗ್ರನರಸಿಂಹ, ಗಜಶಾಲೆ, ಲೋಟಸ್ ಮಹಲ್ ಚಿತ್ರಿಸಿರುವ ಶ್ರುತಿ-ವರ್ಷ, ಯಶಸ್ವಿನಿ- ಸುಷ್ಮಪ್ರಕಾಶ್- ಭುವನೇಶ್ವರಿ ಹಾಗೂ ಪ್ರಮೋದ್ ವಿಜಯನಗರ ಆಳ್ವಿಕೆಯನ್ನು ನೆನಪಿಗೆ ತಂದಿದ್ದಾರೆ.

1528ರಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಬ್ರಾಹ್ಮಣ ಕಲಾವಿದನಿಂದ ನಿರ್ಮಿಸಲ್ಪಟ್ಟ ಉಗ್ರನರಸಿಂಹ ಕೃತಿ 6 ಅಡಿಯಿದೆ. ಜೊತೆಗೆ ಮಹಾಮಸ್ತಕಾಭಿಷೇಕದತ್ತ ಮನಸ್ಸು ಹರಿಸುವ 9 ಅಡಿ ಎತ್ತರದ ಬಾಹುಬಲಿಯನ್ನು ಶ್ರೀಶ ನಿರ್ಮಿಸಿದ್ದಾರೆ.

ಕಲಾ ಪ್ರದರ್ಶನದ ಪ್ರಮುಖ ಆಕರ್ಷಣೆಯಾಗಿ ಗುರುತಿಸಿಕೊಳ್ಳುವ ವಿಕ್ಟೋರಿಯಾ ಮೆಮೋರಿಯಲ್ ಹಾಲ್‌ನ ದೃಶ್ಯ ಕಣ್ಣಿನ ತಣಿಸುವುದರೊಂದಿಗೆ ವಿದ್ಯಾರ್ಥಿಗಳಲ್ಲಿನ ಸೃಜಕಲೆಗೆ ಸಾಕ್ಷಿಯಾಗಿ ನಿಲ್ಲುತ್ತದೆ. ಐದೂವರೆ ಚೌಕಾಕೃತಿಯಲ್ಲಿರುವ ಈ ಮಾದರಿ ಕಟ್ಟಡದ ನಾಲ್ಕೂ ಮೂಲೆಗಳಲ್ಲಿ ಚಿತ್ರಿಸಲಾಗಿರುವ ಗೋಪುರ ಹಾಗೂ ಮಧ್ಯಗೋಪುರದ ಸುತ್ತಲೂ ನಿರ್ಮಿಸಲಾಗಿರುವ ನಾಲ್ಕು ಗೋಪುರಗಳು ದೃಷ್ಟಿನೆಟ್ಟು ನೋಡುವಂತೆ ಪ್ರೇರೇಪಿಸುತ್ತವೆ ಎಂದರೆ ಅತಿಶಯೋಕ್ತಿಯಲ್ಲ, ಅಂಕಿತಾ ಮತ್ತು ತಂಡದ ತಿಂಗಳ ಶ್ರಮವಿರುವ ಈ ಕಲೆ ನೋಡುಗರ ಮನಸೆಳೆಯಿತು.

ಅಂತೆಯೇ ಬೆಂಗಳೂರಿನಲ್ಲಿ ಬೆಂಥಮ್ ಬೌರಿಂಗ್ ನಿರ್ಮಿಸಿದ ಕೆಂಪುಬಣ್ಣದ ಹೈಕೋರ್ಟ್ ಮಾದರಿಯನ್ನು ಪ್ರಜ್ವಲ್, ಅರುಣ ಅಡಿ ಚಚೌಕದಲ್ಲಿ ಕಾವ್ಯ ಸಂಗಡಿಗರು ನಿರ್ಮಿಸಿರುವ ಪುಷ್ಕರಣಿ, ರವಿಕಿರಣ ಹೊಯ್ಸಳ ಲಾಂಛನ, ಪ್ರಿಯದರ್ಶಿನಿಯವರ ಕನ್ಯಾಕುಮಾರಿಯ ಮಹಾತ್ಮ ಗಾಂಧಿ ಮೆಮೋರಿಯಲ್ ಮಾದರಿಗಳು ಪ್ರಮುಖ ಆಕರ್ಷಣೆಗಳಾಗಿವೆ.



ಚಿತ್ರಕಲೆ ಹಾಗೂ ಕರಕುಶಲ ವಸ್ತುಗಳ ಪ್ರದರ್ಶನ ಸಹ ವಿದ್ಯಾರ್ಥಿಗಳಲ್ಲಿ ಕಲಾ ನೈಪುಣ್ಯತೆಯನ್ನು ಸಾರುತ್ತದೆ. ಚಿತ್ರಕಲೆಯಲ್ಲಿ ಕಲಾವಳಿಯ ಕನಸು ಕಟ್ಟಿಕೊಡುವ ಅದಿತಿ ಎಂ. ಅವರ ನಿಸರ್ಗ ಚಿತ್ರಣ, ಶ್ರೀಶ ಅವರ ಚುಕ್ಕಿಚಿತ್ರಗಳು ಸೂಕ್ಷ್ಮಗ್ರಹಿಕೆಗೆ ಸಾಕ್ಷಿಯಾಗಿವೆ. ಬಿಂದುಚಿತ್ರಗಳ ನಿರ್ಮಾಣಕ್ಕೆ ಕನಿಷ್ಠ 5 ದಿನಗಳು ಬೇಕಾಗಿವೆ ಎನ್ನುತ್ತಾರೆ ಶ್ರೀಶ.

ಹಾಗೆಯೇ ವೈಜ್ಞಾನಿಕ ಬೆಳವಣಿಗೆಗಳ ಬಗ್ಗೆಯೂ ಮಾಹಿತಿ ನೀಡುವ ಪ್ರದರ್ಶನದಲ್ಲಿ ಕಲುಷಿತ ನೀರಿನ ಸಂರಕ್ಷಣೆ, ಉಪಗ್ರಹ ಉಡಾವಣೆ, ಭದ್ರಾ ರಿವರ್ ಪ್ರಾಜೆಕ್ಟ್, ಸೌರಮಂಡಲ, ಪ್ರಾಣಿ ಮತ್ತು ಸಸ್ಯ ಜೀವಕೋಶ, ಸೋಲಾರ್ ಸಿಸ್ಟಂ, ಪ್ರನಾಳಶಿಶು ಕುರಿತ ವಿಷಯಗಳ ಬಗ್ಗೆ ವಿದ್ಯಾರ್ಥಿಗಳು ಮಾಹಿತಿ ನೀಡಿದರು. ವಿತನೀರಾವರಿ, ಅರಣ್ಯ ಸಂರಕ್ಷಣೆ ಹಾಗೂ ಮಣ್ಣಿನ ಸಂರಕ್ಷಣೆಯ ಬಗೆಗಿನ ವಿವರವೂ ಇಲ್ಲಿದೆ.

ಕಲಾ ಮತ್ತು ವಿಜ್ಞಾನ ವಸ್ತು ಪ್ರದರ್ಶನ ಕಾರ್ಯಕ್ರಮವನ್ನು ರಾಜ್ಯ ಶಿಲ್ಪಕಲಾ ಅಕಾಡೆಮಿ ಸದಸ್ಯ ಜ್ಞಾನೇಶ್ವರ್ ಉದ್ಘಾಟಿಸಿದರು. ಕಸ್ತೂರಬಾ ಪ್ರೌಢಶಾಲೆ ಉಪಪ್ರಾಂಶುಪಾಲರಾದ ಜಿ.ಕೆ.ಜಯರಾಂ, ಕಾರ್ಯದರ್ಶಿ ಎ.ಜಿ.ರಾಮಚಂದ್ರ, ವಿಕಾಸ ಪ್ರಾಥಮಿಕ ಹಾಗೂ ಪ್ರೌಢಶಾಲೆ ಮುಖ್ಯೋಪಾಧ್ಯಾಯ ಗೋಪಾಲಕೃಷ್ಣ, ರಂಜನಾ, ಶೈಲಜಾ ಹಾಗೂ ವಿಕಾಸ ಕಾಲೇಜಿನ ಪ್ರಾಂಶುಪಾಲರಾದ ಶಂಕರನಾರಾಯಣ ಹಾಗೂ ಶಿಕ್ಷಕರು ಹಾಜರಿದ್ದರು.





ರಾಜ್ಯ ಶಿಲ್ಪ ಅಕಾಡೆಮಿ ಸದಸ್ಯ ಕೆ. ಜ್ಞಾನೇಶ್ವರ್ ಅಭಿಪ್ರಾಯ

### ಅನುಕರಣೆ ಸ್ವಂತಿಕೆಗೆ ಮಾರಕ





... ಜ್ಞಾನೇಶ್ವರ ಅವರನ್ನು ... ಸನ್ಮಾನಿಸಲಾಯಿತು. ಚಿತ್ರದಲ್ಲಿ ಪ್ರತಿಭಾ ರಂಗದ ...



ಶ್ರೀ ಜಗದ್ಗುರು ಪಂಚಾಚಾರ್ಯ ಚಿತ್ರಕಲಾ ಮಹಾವಿದ್ಯಾಲಯದವರು ಗಾಂಧಿ ಪಾರ್ಕ್‌ನ ಬಾಲಭವನದಲ್ಲಿ ಏರ್ಪಡಿಸಿರುವ ಚಿತ್ರಕಲಾ ಪ್ರದರ್ಶನ ಮತ್ತು ಮಾರಾಟವನ್ನು ಖ್ಯಾತ ಶಿಲ್ಪಿ ಕೆ. ಜ್ಞಾನೇಶ್ವರ ಅವರು ಇಂದು ಬೆಳಿಗ್ಗೆ ಉದ್ಘಾಟಿಸಿದರು. ಜಕಣಾಚಾರಿ ಪ್ರಶಸ್ತಿ ವಿಜೇತ ಕಲಾವಿದ ಕೆ. ಕಾಶಿನಾಥ್, ಪ್ರಾಂಶುಪಾಲ ಜಿ.ಎಸ್. ಪಟ್ಟಣಶೆಟ್ಟಿ ಉಪಸ್ಥಿತರಿದ್ದರು.

28 ಮಾರ್ಚ್ 2005 — ನಾವಿಕ ದಿನಪತ್ರಿಕೆ

## ಶಿಲ್ಪಕಲಾ ಅಕಾಡೆಮಿ ಸದಸ್ಯರಾಗಿ ಜ್ಞಾನೇಶ್ವರ್



ಶಿವಮೊಗ್ಗ, ಮಾ.28:- ನಗರದ ಖ್ಯಾತ ಶಿಲ್ಪಿ ಕೆ. ಜ್ಞಾನೇಶ್ವರ್‌ರವರನ್ನು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ನೂತನ ಸದಸ್ಯರನ್ನಾಗಿ ರಾಜ್ಯ ಸರ್ಕಾರ ನೇಮಕಮಾಡಿದೆ.

ಜಿಲ್ಲೆಯ ಶಿಲ್ಪಕಲಾವಿದರು ತಮ್ಮ ಕ್ಷೇತ್ರಕ್ಕೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಜ್ಞಾನೇಶ್ವರ್‌ರನ್ನು ನಂ. 8, ಕಲಾಕುಂಜ್, 1ನೇ ಅಡ್ಡ ರಸ್ತೆ, ಪ್ರಿಯದರ್ಶಿನಿ ಬಡಾವಣೆ, ಕಟ್ಟೆ ಸುಬ್ಬಣ್ಣ ಕಲ್ಯಾಣ ಮಂದಿರದ ಪಕ್ಕ, ಆಲ್ಕೊಳ, ಶಿವಮೊಗ್ಗ ಈ ವಿಳಾಸದಲ್ಲಿ ಸಂಪರ್ಕಿಸಬಹುದು. ಅವರ ದೂರವಾಣಿ ಸಂಖ್ಯೆ 265739.







ಕರ್ನಾಟಕ ಶಿಲ್ಪಕಲಾ ಅಕಾಡೆಮಿ ವತಿಯಿಂದ ಇತ್ತೀಚೆಗೆ ಬೆಂಗಳೂರಿನ ರವೀಂದ್ರ ಕಲಾ ಕ್ಷೇತ್ರದಲ್ಲಿ ಏರ್ಪಡಿಸಲಾಗಿದ್ದ 2008-09ರ ಗೌರವ ಪ್ರಶಸ್ತಿ ಪ್ರಧಾನ ಸಮಾರಂಭ ಹಾಗೂ ವಾರ್ಷಿಕ ಶಿಲ್ಪಕಲಾ ಪ್ರದರ್ಶನದಲ್ಲಿ ಶಿವಮೊಗ್ಗದ ಶಿಲ್ಪಿ ಕೆ. ಜ್ಞಾನೇಶ್ವರ್‌ರವರಿಗೆ ಪ್ರಶಸ್ತಿ ನೀಡಿ ಗೌರವಿಸಲಾಯಿತು. ವಾರ್ಷಿಕ ಶಿಲ್ಪಕಲಾ ಪ್ರದರ್ಶನ ಪ್ರಶಸ್ತಿಯನ್ನು ಕೆ. ಜ್ಞಾನೇಶ್ವರ್‌ರವರ ಪುತ್ರ ಕೆ. ಪ್ರವೀಣ್ ಪಡೆದುಕೊಂಡರು.









## Mammoth art

SHIMOGA

claimed. The brothers now run a traditional arts school here.

Muralidhara Khajane

## Talk of the Towns

DECCAN HERALD, December 5, 88



"Hunger," a clay model by K. Gnaneswar on display at an exhibition in Shimoga recently

### Art show

SHIMOGA: For the last several years there has never been a well-organised art exhibition in town. Recently a three-day art exhibition and kalamela was organised here by the artists and sculptors in the district under the auspices of the Shahyadri Drushya Kala Parishat.

As many as 77 artists and sculptors belonging to both the traditional and modern schools participated in the exhibition. Paintings of several kinds including landscapes, clay models, sculptures and impressive portraits formed part of the impressive display. The venue was at Karnataka Sangha Bhavan. The exhibition went off well despite lack of facilities at the Bhavan.

There were both veterans as well as freshers among the participants in the exhibition.

One of the highlights of the event was the demonstration by the participants in areas such as painting, clay modelling and cartoon drawing followed by lectures on various aspects.

Chairman of the Karnataka Lalitha Kala Academy inaugurated the exhibition. V. Nagaraja



loted artist Kashinath inaugurating an art exhibition organised by the Chittara rganisation at Kuvempu Rangamandir in Shimoga on Thursday by drawing a picture of anesha. Assistant director of the Department of Kannada and Culture N Harikumar nd Chittara president Jnaneshwar look on- Express photo.

# ಪರಾಮರ್ಶನ ಗ್ರಂಥ ಋಣ


1. ಎಂ. ಎ. ಚೆಟ್ಟಿಯವರ ಜೀವನ. 1985 – ಡಾ. ಲಕ್ಷ್ಮೀದೇವಿ ಗವಾಯಿ
2. ವರ್ಣ ಸಂಚಯ ಪ್ರ. ವಿಜಯಕಲಾ ಮಂದಿರ ಮಹಾವಿದ್ಯಾಲಯ ಇಳಕಲ್2001, – ಡಾ. ಎಸ್. ಸಿ. ಪಾಟೀಲ
3. ಕರ್ನಾಟಕ ದ ಜನಪದ ಚಿತ್ರಕಲೆ,1991 – ಡಾ. ಎಸ್. ಸಿ.ಪಾಟೀಲ
4. ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಶಂಗಳು,1998 – ಡಾ. ಆ. ಲ. ನರಸಿಂಹನ್

5.ಕರ್ನಾಟಕದ ಭಿತ್ತಿಚಿತ್ರಕಲೆ, 2000 – ಡಾ. ಯಾದಪ್ಪ ಪರದೇಶಿ

6. ಕರ್ನಾಟಕದ ಜನಪದ ಶಿಲ್ಪಕಲೆ,2002 – ಡಾ. ಶಿವಾನಂದ ಬಂಟನೂರು
7. ಕಲಾವಿದ ಆರ್. ಎಂ. ಹಡಪದ, 2003 – ಡಾ. ಸಿದ್ಧಲಿಂಗ ಸ್ವಾಮಿ ಹಿರೇಮಠ
8. ಸುರಪುರ ಶೈಲಿ ಚಿತ್ರಕಲೆ,2003 – ಡಾ. ಮಲ್ಲಿಕಾರ್ಜುನ ಬಾಗೊಡಿ
9. ಚಿತ್ರಕಲಾವಿದ, ಜೆ.ಎಸ್.ಖಂಡೇರಾವ್,2002 – ಡಾ.ಮಲ್ಲಿಕಾರ್ಜುನ ಬಾಗೊಡಿ
10. ಕಲಾವಿದ ಡಿ.ವಿಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು,2005 – ಶಂಕರಪ್ಪ ಎ. ಕುಂದಗೋಳ
11. ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಲು – ಸಂ. ಡಾ.ಎಸ್.ಸಿ.ಪಾಟೀಲ
12. ಸಮಕಾಲೀನ ಕಲೆ ಲಲಿತಕಲಾ,1987 – ಸಂ. ಬಿ.ಪಿ.ಕೆ.ಶಾಸ್ತ್ರಿ
13. ಎಂ.ಟಿ.ವಿ. ಆಚಾರ್ಯ,1990 – ಲೇಖಕ. ಚಿ.ಸು. ಕೃಷ್ಣಶೆಟ್ಟಿ
14. ಕಲಾ ಸಂವೇದನೆಯ ಒಳನೋಟುಗಳು (ಸಂ)ಸಿ. ಚಂದ್ರಶೇಖರ, 1992 – ಕೆ.ವಿ.ಸುಬ್ರಹ್ಮಣ್ಯಂ
15. ರೇಖಾಚಿತ್ರ, (ಸಂ) ಬಿ.ವಿ.ಕೆ.ಶಾಸ್ತ್ರಿ – ಬಿ.ವಿ.ಕೆ.ಶಾಸ್ತ್ರಿ
16. ಕಲಾ ಪ್ರಪಂಚ: (ಪ್ರ) ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.2001 – ಡಾ॥ಶಿವರಾಮಕಾರಂತ
17. ಪ್ರೇಕ್ಷಕ ಕಲಾವಿದ ಹಾಗೂ ವಿಮರ್ಶಕ(ಸಂ) – ಡಾ. ಎಸ್.ಸಿ.ಪಾಟೀಲ್
18. ಚಿತ್ರಾಕ್ಷಿ.(ತೀ) – ಶಿವರಾಮ ಕಾರಂತ.
19. ಕಲ;ಎ ಮತ್ತು ರಸಸ್ವಾಧನೆ(ಸಂ) – ಪ್ರೊ.ಎಂ. ಎಚ್.ಕೃಷ್ಣಯ್ಯ
20. ಚಿತ್ರಚಿತ್ತ – ವಿ.ಸು. ಕೃಷ್ಣಶೆಟ್ಟಿ
21. ಚಿತ್ರಕಲಾ ಪ್ರಪಂಚ1993(ಪ್ರ) ಕರ್ನಾಟಕ ಲಲಿತಕಲಾ ಆಕಾಡೆಮಿ – ಸಂ.ಟಿ.ಆರ್. ತಿಪ್ಪೇಸ್ವಾಮೀ
22. ಆಲೇಖ್ಯ – ಡಾ. ಅ.ಲಿ.ನರಸಿಂಹನ್
23. ಸೃಷ್ಟಿ – ಡಾ. ಬಿ.ಕೆಹಿರೇಮಠ
24. ಕಲಾಕೋಶ – ಎನ್.ಮರಿಶಾ ಮೇಶಾರ್

25. ಸಂಕುಲ–ಸಂಚಿಕೆ – ಚಿ. ಸು.ಕೃಷ್ಣಶೆಟ್ಟಿ

26. ಕಲಾವಿದರ ಅಭಿಪ್ರಾಯ – ದಿ. 28–07–2003ಬಾದಾಮಿ

27. ಬಸವಣ್ಣನವರ ವಚನಗಳು – ಆರ್.ಸಿ. ಹಿರೇಮಠ

28. ಕಲೆ ಮತ್ತು ನಾನು – ಎಂ.ಟಿ. ಆಚಾರ್ಯ

29. ಕರ್ನಾಟಕ ಭಿತ್ತಿಚಿತ್ರ ಪರಂಪರೆ – ಅ.ಲ.ನರಸಿಂಹನ್

30. ಡಿ.ವಿ.ಜಿ ಮಂಕುತಿಮ್ಮನ ಕಗ್ಗ

31. ಪಾಶ್ಚಿಮಾತ್ಯ ಕಾವ್ಯ ಮೀಮಾಂಸೆ ಅಪ್ರಕಟಿತ(ಪ್ರಕಟಿತ) – ಡಾ.ಬಿ.ಬಿ.ಹೆಂಡಿ

32. ಸೀಮಾಗೆ – ಶ್ರೀಕಂಠ ಅವರ ಕೊಡುಗೆ

33. ಕಲಾವಿದ ಜ್ಞಾನೇಶ್ವರವರ ಸಂದರ್ಶನದಿಂದ ತಿಳಿದ ಮಾಹಿತಿ

34. ಕಲಾ ಪ್ರಪಂಚ, – ಶಿವರಾಮ ಕಾರಂತ

35.ಕೆ.ಕೆ.ಹೆಬ್ಬಾರ – ಎನ್.ಮರಿಶಾಮಾಚಾರ್

36. ಸೌಂದರ್ಯ ಮತ್ತು ಕಲೆ – ಬಿ.ಕೆ.ರಾಮಕೃಷ್ಣರಾವ್

37. ದೃಶ್ಯ ಪದ ದೃಶ್ಯ ಲೇಖಕರು ಡಾ. ಶಿವಾನಂದ ಬಂಟನೂರು

38. ಮಾಟದೊಳಗಿನ ನೋಟ – ಡಾ. ಶಿವಾನಂದ ಬಂಟನೂರು

